RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶುಕ್ರವಾರ, ಮೇ ೨೪, ೨೦೧೩ (ಜ್ಯೇಷ್ಠ ೩, ಶಕ ವರ್ಷ ೧೯೩೫) | ನಂ. ೭೯೬ |
| **Part – IV-A** | **Bangalore, Friday, May 24, 2013 (Jyeishta 3, Shaka Varsha 1935)** | **No. 796** |


## PARLIAMENTARY AFFAIRS AND LEGISLATION SECRETARIAT

### NOTIFICATION

### No. DPAL 10 SAMVYAVI 2013 (P), Bangalore, Dated : 24.05.2013

The following Order made by the Governor is hereby published for general information:-

**"ORDER - I**

In exercise of the powers conferred by Article 188 of the Constitution of India, I, H.R.Bhardwaj, Governor of Karnataka, do hereby appoint Sri Malikayya Venkayya Guttedar, Member of the Legislative Assembly as the person before whom a Member of the Legislative Assembly shall, before taking his seat, make and subscribe an oath or affirmation.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**K. DWARAKANATH BABU**
Secretary to Government (I/C)
Department of Parliamentary Affairs and Legislation

ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶುಕ್ರವಾರ, ಮೇ ೨೪, ೨೦೧೩ (ಜ್ಯೇಷ್ಠ ೩, ಶಕ ವರ್ಷ ೧೯೩೫) | ನಂ. ೭೯೭ |
| **Part – IV-A** | **Bangalore, Friday, May 24, 2013 (Jyeishta 3, Shaka Varsha 1935)** | **No. 797** |


## PARLIAMENTARY AFFAIRS AND LEGISLATION SECRETARIAT

### NOTIFICATION

### No. DPAL 10 SAMVYAVI 2013 (P), Bangalore, Dated : 24.05.2013

The following Order made by the Governor is hereby published for general information:-

**"ORDER - II**

In exercise of the powers conferred by clause (1) of Article 180 of the Constitution of India, I, H.R.Bhardwaj, Governor of Karnataka, do hereby appoint Sri Malikayya Venkayya Guttedar, a Member of the Legislative Assembly to

perform the duties of the Office of the Speaker of the Legislative Assembly with effect from 29.05.2013 until a Speaker is duly elected by the House.

**H.R. BHARDWAJ**
**GOVERNOR OF KARNATAKA"**

By order and in the name of the Governor of Karnataka,

**K. DWARAKANATH BABU**
Secretary to Government (I/C)
Department of Parliamentary Affairs and Legislation


# ವಿಶೇಷ ರಾಜ್ಯ ಪತ್ರಿಕೆ

| ಭಾಗ – III | ಬೆಂಗಳೂರು, ಶನಿವಾರ, ಮೇ ೨೫, ೨೦೧೩ (ಜ್ಯೇಷ್ಠ ೪, ಶಕ ವರ್ಷ ೧೯೩೫) | ನಂ. ೭೯೯ |
|---|---|---|
| **Part – III** | **Bangalore, Saturday, May 25, 2013 (Jyeishta 4, Shaka Varsha 1935)** | **No. 799** |


## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂ: ಕಾಇ 63 ಕಾಬಾಸೇ 2012, ಬೆಂಗಳೂರು, ದಿನಾಂಕ:24–05–2013**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಈ ಕೆಳಗಿನ ವೃಂದದ ಅಧಿಕಾರಿಗಳ ದಿನಾಂಕ 01.01.2013ರಲ್ಲಿದ್ದಂತೆ ಕರಡು ಜೇಷ್ಠತಾ ಪಟ್ಟಿಯನ್ನು ಕರ್ನಾಟಕ ನಾಗರಿಕ ಸೇವಾ (ಜೇಷ್ಠತೆ) ನಿಯಮಾವಳಿ, 1957ರ ನಿಯಮ 10(2)(ಎ) ಅಡಿಯಲ್ಲಿ ತಯಾರಿಸಿ ಜೇಷ್ಠತೆಯನ್ನು ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ನಿಗಧಿಗೊಳಿಸಲಾಗಿದೆ.

| ಕ್ರ.ಸಂ. | ವೃಂದ | ಅನುಬಂಧ |
|---|---|---|
| 1. | ಕಾರ್ಖಾನೆಗಳ ಜಂಟಿ ನಿರ್ದೇಶಕರು | 1 |
| 2. | ಕಾರ್ಖಾನೆಗಳ ಉಪ ನಿರ್ದೇಶಕರು | 2 |
| 3. | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು | 3 |
| 4. | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | 4 |
| 5. | ಬಾಯ್ಲರುಗಳ ಜಂಟಿ ನಿರ್ದೇಶಕರು | 5 |
| 6. | ಬಾಯ್ಲರುಗಳ ಉಪ ನಿರ್ದೇಶಕರು | 6 |
| 7. | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು | 7 |
| 8. | ಬಾಯ್ಲರುಗಳ ಸಹಾಯಕ ನಿರ್ದೇಶಕರು | 8 |
| 9. | ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) | 9 |
| 10. | ಆಡಳಿತಾಧಿಕಾರಿ | 10 |
| 11. | ಪತ್ರಾಂಕಿತ ವ್ಯವಸ್ಥಾಪಕರು | 11 |

ಈ ಸಂಬಂಧ ಆಕ್ಷೇಪಣೆಗಳು ಇದ್ದಲ್ಲಿ, ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರಿಗೆ ಸಲ್ಲಿಸುವಂತೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಶಿವರಾಮ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
(ಕಾರ್ಖಾನೆ ಮತ್ತು ಬಾಯ್ಲರುಗಳು)

## ಅನುಬಂಧ –1

### ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 1 | ಎ.ಆರ್. ವಿಜಯೇಂದ್ರ | ಮುಂಬಡ್ತಿ | 26–10–1958 | 01–04–1982 | 19–09–2006 | 18–09–2006 | |
| 2 | ಎಂ.ಎನ್. ಜಕ್ಕಣ್ಣವರ್ | ಮುಂಬಡ್ತಿ | 05–08–1956 | 12–04–1982 | 18–09–2012 | 18–09–2012 | |

## ಅನುಬಂಧ –2

### ಕಾರ್ಖಾನೆಗಳ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎ. ಸೋಮಶೇಖರ | ಮುಂಬಡ್ತಿ | 22–05–1955 | 02–01–1984 | 20–04–2001 | 20–04–2001 | |
| 2 | ಜಿ.ಪಿ. ರಾಜಗೋಪಾಲ | ಮುಂಬಡ್ತಿ | 31–01–1959 | 05–01–1984 | 16–07–2001 | 16–07–2001 | |
| 3 | ಬಿ.ವಿ. ರವಿಕುಮಾರ್ | ಮುಂಬಡ್ತಿ | 04–04–1959 | 20–06–1986 | 10–10–2002 | 10–10–2002 | |
| 4 | ಡಿ.ಸಿ. ಜಗದೀಶ್ | ಮುಂಬಡ್ತಿ | 10–10–1959 | 25–06–1983 | 16–10–2002 | 16–10–2002 | |
| 5 | ಎಸ್.ಆರ್. ಶ್ರೀಧರ್ | ಮುಂಬಡ್ತಿ | 06–09–1957 | 17–06–1983 | 24–02–2005 | 24–02–2005 | |
| 6 | ಕೆ. ಶ್ರೀನಿವಾಸ್ ( ಎಸ್.ಸಿ.) | ಮುಂಬಡ್ತಿ | 14–02–1966 | 28–09–1988 | 02–03–2005 | 02–03–2005 | |
| 7 | ಟಿ.ಆರ್.ರಮೇಶ್ | ಮುಂಬಡ್ತಿ | 30–07–1960 | 26–09–1988 | 21–07–2007 | 21–07–2007 | |
| 8 | ಕೆ.ಜಿ. ನಂಜಪ್ಪ | ಮುಂಬಡ್ತಿ | 25–04–1972 | 03–08–1995 | 17–09–2012 | 17–09–2012 | |

## ಅನುಬಂಧ –3

### ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 1. | ಟಿ.ವಿ. ನಾರಾಯಣಪ್ಪ (ಎಸ್.ಸಿ) | ಮುಂಬಡ್ತಿ | 10–03–1967 | 09–08–1995 | 19–10–2002 | } * | |
| 2. | ಎ.ಜೆ. ಸತೀಶಬಾಬು | ಮುಂಬಡ್ತಿ | 12–01–1963 | 03–08–1995 | 19–10–2002 | | |
| 3. | ರವೀಂದ್ರನಾಥ ಎನ್ ರಾಠೋಡ್ (ಎಸ್.ಸಿ.) | ಮುಂಬಡ್ತಿ | 22–05–1969 | 29–12–1995 | 19–10–2002 | 19–10–2002 | |
| 4. | ಎಚ್.ಎಸ್. ನರೇಂದ್ರಬಾಬು | ಮುಂಬಡ್ತಿ | 23–08–1966 | 01–04–1991 | 08–11–2002 | 08–11–2002 | |
| 5. | ಆರ್.ಕೆ. ಪಾರ್ಥಸಾರಥಿ | ಮುಂಬಡ್ತಿ | 23–12–1967 | 29–10–1997 | 24–02–2005 | 24–02–2005 | |
| 6. | ಎನ್. ನವನೀತಮೋಹನ್ | ಮುಂಬಡ್ತಿ | 11–03–1971 | 12–11–1997 | 26–02–2005 | 26–02–2005 | |
| 7. | ಎಂ.ಎಸ್. ಮಹದೇವ್ | ಮುಂಬಡ್ತಿ | 20–07–1967 | 12–11–1997 | 08–06–2005 | 08–06–2005 | |
| 8. | ವಿ.ತಿಮ್ಮರಾಜು | ಮುಂಬಡ್ತಿ | 18–05–1970 | 20–10–1997 | 03–08–2007 | 03–08–2007 | |

* **ಟಿಪ್ಪಣಿ:–** ರಿಟ್ ಅರ್ಜಿ ಸಂ: 18191–93/2009 ರ ಮೇಲೆ ದಿನಾಂಕ: 10–09–2012 ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಈ ಇಬ್ಬರು ಅಧಿಕಾರಿಯವರ ಜೇಷ್ಠತೆಯನ್ನು ಫೀಡರ್ ಕೇಡರ್‌ನಲ್ಲಿ (ಕಾರ್ಖಾನೆಗಳ ಸಹಾಯಕ ನಿರ್ದೇಶಕರು) ಪುನರ್ ನಿಗದಿಪಡಿಸಲಾಗಿದೆ. ಮುಂದುವರಿದು, ಮೇಲ್ಕಂಡ ವೃಂದದ ಜೇಷ್ಠತೆಯು ಶ್ರೀ ಟಿ.ವಿ.ನಾರಾಯಣಪ್ಪ ಮತ್ತು ಇನ್ನೊಬ್ಬರು ಭಾರತದ ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಿಸಲಾದ ಎಸ್.ಎಲ್.ಪಿ. ಸಂಖ್ಯೆ: 34495–498/2012 ರ ಮೇಲಿನ ಅಂತಿಮ ತೀರ್ಪಿಗೆ ಒಳಪಡುತ್ತದೆ.

## ಅನುಬಂಧ – 4

### ಕಾರ್ಖಾನೆಗಳ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಸ್.ಎ. ನರಸಿಂಹಮೂರ್ತಿ | ನೇರ ನೇಮಕಾತಿ | 20–07–1967 | 13–11–1997 | – | 13–11–1997 | |
| 2 | ರಾಜೇಶ ಸಿ ಮಿಶ್ರಿಕೋಟಿ ಎಸ್.ಸಿ) | ನೇರ ನೇಮಕಾತಿ | 17–11–1969 | 20–10–1997 | – | 20–10–1997 | |
| 3 | ಕೆ.ಎಸ್. ಕೃಷ್ಣಪ್ಪ (ಎಸ್.ಟಿ) | ನೇರ ನೇಮಕಾತಿ | 01–06–1971 | 12–11–1997 | – | 12–11–1997 | |
| 4 | ಎಂ.ಎ. ಸೋಮಶೇಖರ | ನೇರ ನೇಮಕಾತಿ | 15–07–1973 | 11–03–1998 | – | 11–03–1998 | |
| 5 | ವೆಂಕಟೇಶ ರಾಠೋಡ್ (ಎಸ್.ಸಿ.) | ನೇರ ನೇಮಕಾತಿ | 24–03–1974 | 16–03–1998 | – | 16–03–1998 | |
| 6 | ಭಾರತಿ ಮಗದುಮ ಅಣ್ಣಪ್ಪ | ನೇರ ನೇಮಕಾತಿ | 27–08–1966 | 23–03–1998 | – | 23–03–1998 | |
| 7 | ಕೆ.ಎನ್. ಸಫೀರ್ ಅಹ್ಮದ್ | ನೇರ ನೇಮಕಾತಿ | 09–08–1963 | 05–03–1998 | – | 05–03–1998 | |
| 8 | ಟಿ.ವಿ. ನಾರಾಯಣಪ್ಪ | ನೇರ ನೇಮಕಾತಿ | 10–03–1967 | 09–08–1995 | – | 04–11–1999 | * |
| 9 | ಎ.ಜೆ. ಸತೀಶಬಾಬು | ನೇರ ನೇಮಕಾತಿ | 12–01–1963 | 03–08–1995 | – | 15–03–1999 | |
| 10 | ಎಚ್. ಸುರೇಶ | ನೇರ ನೇಮಕಾತಿ | 20–06–1970 | 29–04–1999 | – | 29–04–1999 | |
| 11 | ಎ.ಶೀನಿವಾಸ್ | ನೇರ ನೇಮಕಾತಿ | 14–05–1981 | 02–07–2009 | – | 02–07–2009 | |
| 12 | ಎ.ಪ್ರಕಾಶ್ ಶೆಣೈ | ನೇರ ನೇಮಕಾತಿ | 21–05–1977 | 03–07–2009 | – | 03–07–2009 | |
| 13 | ಎಂ.ಕೆ.ಉಮೇಶ್ | ನೇರ ನೇಮಕಾತಿ | 10–07–1985 | 02–07–2009 | – | 02–07–2009 | |

* **ಟಿಪ್ಪಣಿ:–** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿಗಳ ಸಂ: 18191–93/2009 ರ ಮೇಲೆ ದಿನಾಂಕ: 10–09–2012 ರ ತೀರ್ಪಿಗನುಸಾರ ಹಾಗೂ ಕೆಸಿಎಸ್ (ಸಿನಿಯಾರಿಟಿ) ರೂಲ್ 1957 ರ ನಿಯಮ 6 ರಂತೆ ಜೇಷ್ಠತೆಯನ್ನು ಪುನರ್ ನಿಗದಿಪಡಿಸಲಾಗಿದೆ. ಮುಂದುವರಿದು, ಮೇಲ್ಕಂಡ ವೃಂದದ ಜೇಷ್ಠತೆಯು ಶ್ರೀ ಟಿ.ವಿ.ನಾರಾಯಣಪ್ಪ ಮತ್ತು ಇನ್ನೊಬ್ಬರು ಭಾರತದ ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಿಸಲಾದ ಎಸ್.ಎಲ್.ಪಿ. ಸಂಖ್ಯೆ: 34495–498/2012 ರ ಮೇಲಿನ ಅಂತಿಮ ತೀರ್ಪಿಗೆ ಒಳಪಡುತ್ತದೆ.

## ಅನುಬಂಧ – 5

### ಬಾಯ್ಲರುಗಳ ಜಂಟಿ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಟಿ.ಜಿ. ಮಂಜುನಾಥ ( ಎಸ್.ಸಿ.) | ಮುಂಬಡ್ತಿ | 24–09–1958 | 18–02–1982 | 09–07–2004 | 09–07–2004 | |

## ಅನುಬಂಧ – 6

### ಬಾಯ್ಲರುಗಳ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಸ್.ಬಿ. ಬಿರಾದಾರ | ಮುಂಬಡ್ತಿ | 08–11–1954 | 08–03–1984 | 04–02–2003 | 04–02–2003 | |
| 2 | ಎಸ್.ಎಂ. ವಾಸಣ್ಣ | ಮುಂಬಡ್ತಿ | 05–03–1958 | 08–03–1984 | 10–11–2004 | 10–11–2004 | |

ಅನುಬಂಧ – 7

ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಕೆ.ವಿ.ಚಂದ್ರಮೌಳಿ | ಮುಂಬಡ್ತಿ | 20–05–1956 | 07–03–1984 | 02–05–1996 | 02–05–1996 | |
| 2 | ಅಶೋಕ. ಆರ್.ಗಾಂವ್‌ಕರ | ಮುಂಬಡ್ತಿ | 14–02–1956 | 10–08–1989 | 26–08–1999 | 26–08–1999 | |
| 3 | ಕೆ.ವಿ.ಪಾಲಯ್ಯ (ಎಸ್.ಟಿ) | ಮುಂಬಡ್ತಿ | 19–09–1962 | 21–04–1995 | 04–02–2003 | 04–02–2003 | |
| 4 | ಕೆ.ಎಂ.ಪ್ರಥಮ್ | ಮುಂಬಡ್ತಿ | 20–05–1969 | 19–12–1991 | 23–12–2004 | 23–12–2004 | |

ಅನುಬಂಧ – 8

ಬಾಯ್ಲರುಗಳ ಸಹಾಯಕ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಂ.ಎಚ್. ಚಿಕ್ಕಮುನಿಯಪ್ಪ (ಎಸ್.ಸಿ ) | ನೇರ ನೇಮಕಾತಿ | 18–04–1964 | 16–10–2003 | – | 16–10–2003 | |
| 2 | ಎಸ್.ಆರ್.ಶ್ರೀನಿವಾಸ್ | ನೇರ ನೇಮಕಾತಿ | 04–01–1985 | 02–07–2009 | – | 02–07–2009 | |
| 3 | ಬಿ.ಕೆ.ಶ್ವೇತಾ | ನೇರ ನೇಮಕಾತಿ | 22–10–1985 | 09–07–2009 | – | 09–07–2009 | |
| 4 | ಟಿ.ರವಿ (ಎಸ್.ಟಿ.) | ನೇರ ನೇಮಕಾತಿ | 04–06–1984 | 03–07–2009 | – | 03–07–2009 | |

ಅನುಬಂಧ – 9

ಕಾರ್ಖಾನೆಗಳ ಜಂಟಿ ನಿರ್ದೇಶಕರು (ವೈದ್ಯಕೀಯ) ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಡಾ:ವಿ.ಎಚ್.ಎಚ್. ಸುರೇಂದ್ರ | ಮುಂಬಡ್ತಿ | 09–03–1958 | 31–04–1984 | 19–09–2006 | 19–09–2006 | |

ಅನುಬಂಧ – 10

ಆಡಳಿತಾಧಿಕಾರಿ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ವೀರಪ್ಪ | ಮುಂಬಡ್ತಿ | 28–03–1955 | 22–09–1977 | 23–08–2004 | 23–08–2004 | |

ಅನುಬಂಧ – 11

ಪತ್ರಾಂಕಿತ ವ್ಯವಸ್ಥಾಪಕರ ವೃಂದದ ಕರಡು ಜೇಷ್ಠತಾ ಪಟ್ಟಿ : ದಿನಾಂಕ: 01–01–2013 ರಲ್ಲಿದ್ದಂತೆ

| ಕ್ರ. ಸಂ. | ಅಧಿಕಾರಿಯವರ ಹೆಸರು ಶ್ರೀಯುತರಾದ | ನೇರ ನೇಮಕಾತಿ/ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ : ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಗಜಾನನ ಚಂಡಿಯೇಕರ್ | ಮುಂಬಡ್ತಿ | 22–03–1954 | 11–01–1982 | 20–09–2007 | 20–09–2007 | |
| 2 | ಜೆ.ಆರ್.ಆದಿನಾರಾಯಣ ಮುನಿ (ಎಸ್.ಸಿ.) | ಮುಂಬಡ್ತಿ | 17–04–1955 | 06–06–1988 | 09–03–2011 | 09–03–2011 | |
| 3 | ಪ್ರಭಾವತಿ ದೇವಿ | ಮುಂಬಡ್ತಿ | 01–03–1957 | 21–06–1976 | 16–11–2012 | 16–11–2012 | |

ಬಿ. ಶಿವರಾಮ ಗೌಡ
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಮೇ ೨೫, ೨೦೧೩ (ಜ್ಯೇಷ್ಠ ೪, ಶಕ ವರ್ಷ ೧೯೩೫) | ನಂ.೮೦೦ |
|---|---|---|
| **Part – IV-A** | **Bangalore, Saturday, May 25, 2013 (Jyeishta 4, Shaka Varsha 1935)** | **No. 800** |

## CABINET AFFAIRS AND PERSONNEL AND ADMINISTRATIVE REFORMS SECRETARIAT

### NOTIFICATION

**No. GS 64 GOB 2013, Bangalore, dated : 25th May, 2013**

On the advice of Shri Siddaramaiah, Chief Minister of Karnataka and in exercise of the powers vested in me under Article 164(1) of the Constitution of India, **I, H.R. BHARDWAJ, Governor of Karnataka**, do hereby appoint Shri S.R. Patil as the Cabinet Minister in the Council of Ministers.

**H.R. BHARDWAJ**
**GOVERNOR OF KARNATAKA**

By order and in the name of the Governor of Karnataka,

**B.V. KULKARNI**
Additional Secretary to Government
D.C.A. & D.P.A.R. (State Protocol)

No. DCA 110 GAM 2013
Dated : 25th May, 2013

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಭಾನುವಾರ, ಮೇ ೨೬, ೨೦೧೩ (ಜ್ಯೇಷ್ಠ ೫, ಶಕ ವರ್ಷ ೧೯೩೫) | ನಂ.೮೦೧ |
|---|---|---|
| **Part – IV-A** | **Bangalore, Sunday, May 26, 2013 (Jyeishta 5, Shaka Varsha 1935)** | **No. 801** |

## CABINET AFFAIRS AND PERSONNEL AND ADMINISTRATIVE REFORMS SECRETARIAT

### NOTIFICATION

**No. GS 64 GOB 2013, Bangalore, dated : 26th May, 2013**

In exercise of the powers conferred by Clause (3) of Article 166 of the Constitution of India, read with Rule 5 of the Karnataka Government (Transaction of Business) Rules, 1977, and in partial modification of the earlier Notification of even No. dated 19th May, 2013**, I, H.R. BHARDWAJ, Governor of Karnataka,** on the advice of the Chief Minister, do hereby allocate with immediate effect, the business of Government, in so far as it relates to the following Minister:

**CABINET MINISTER**

| Sl. No. | Name of the Minister | Portfolio |
|---|---|---|
| 1 | Shri S.R. Patil | 1) Planning and Statistics Department<br>2) IT, BT and Science & Technology Department |

**H.R. BHARDWAJ**
**GOVERNOR OF KARNATAKA**

By order and in the name of the Governor of Karnataka,

**B.V. KULKARNI**
Additional Secretary to Government
D.C.A. & D.P.A.R. (State Protocol)

No. DCA 110 GAM 2013
Dated : 26th May, 2013


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – V | ಬೆಂಗಳೂರು, ಸೋಮವಾರ, ಮೇ ೨೭, ೨೦೧೩ (ಜ್ಯೇಷ್ಠ ೬, ಶಕ ವರ್ಷ ೧೯೩೫) | ನಂ. ೮೦೨ |
| **Part – V** | **Bangalore, Monday, May 27, 2013 (Jyeishta 6, Shaka Varsha 1935)** | **No. 802** |


## OFFICE OF THE REGISTRAR GENERAL, HIGH COURT OF KARNATAKA, HIGH COURT BUILDINGS, BANGALORE - 560 001

### NOTIFICATION

**NO.HCE 726/2011, BANGALORE, DATED: 27TH MAY 2013**

**RECRUITMENT TO THE POST OF DRIVERS**

**LAST DATE OF RECEIPT OF APPLICATIONS: 1ST JULY 2013**

Applications in the prescribed proforma appended hereto are invited from the candidates who are qualified and eligible as on the last date fixed for receipt of applications for recruitment to **11 (ELEVEN)** posts of Drivers on the establishment of High Court of Karnataka.

**2. Method of Recruitment:-** Selection of candidates shall be made in accordance with the High Court of Karnataka Service (Conditions of Service and Recruitment) Rules, 1973, and the High Court of Karnataka Service (Direct Recruitment by Selection) Rules, 1984 as amended from time to time.

> "By direct recruitment by selection of suitable candidates who possess license in driving, as a paid employee, heavy vehicles or light motor vehicles, as the case may be, and who have got fair knowledge of English or Kannada".

**3. Scale of Pay:-** 11600-200-12000-250-13000-300-14200-350-15600-400-17200-450-19000-500-21000.

**4. Classification of Vacancies:-**

| | Unreserved | Rural Candidate | Ex- Servicemen | Total |
|---|---|---|---|---|
| **General Merit** | 2 | 3 | 1 | 6 |
| **Scheduled Caste** | 1 | 1 | - | 2 |
| **Cat – I** | 1 | - | - | 1 |
| **Cat – IIA** | 1 | - | - | 1 |
| **Cat – IIB** | 1 | - | - | 1 |
| **TOTAL** | **6** | **4** | **1** | **11** |

**If sufficient candidates are not available under Rural/ Ex-servicemen quota, the same shall be filled from the candidates belonging to the unreserved pool of the same category.**

**Note:** The above classification has been done in view Government Orders:-

1) DPAR 08 SRS 95 DATED 20.06.95
2) DPAR 97 SRS 2002 DATED 22.11.2002

**5. Probation:-** The period of probation shall be two years, subject to the rules prescribed in this behalf.

**6. Age Limit:-** Must have attained the age of 18 years and must not have attained the age of:-

a) 40 years in the case of a person belonging to any of the Scheduled Castes or Scheduled Tribes or Category-I of other Backward Classes.

b) 38 years in the case of a person belonging to any of the Category-II (a) or II (b) or III (a) or III (b) of other backward classes; and

c) 35 years in the case of any other person.

**7.** Applicants when called for the Driving Test must appear at their own expenses, at the place fixed for such test.

**8.** No person who attempts to obtain extraneous support by any means for his candidature from officials or non-officials shall be eligible for appointment.

**9. Fee:-** A fee of Rs.150/- (Rupees One Hundred and Fifty) is prescribed for every application. It should be remitted by means of Crossed Indian Postal Order drawn in favour of the Registrar General, High Court of Karnataka, High Court Buildings, Bangalore - 560 001, and the same should be submitted along with the applications. Fee once paid shall not be refunded under any circumstances. Scheduled Caste / Scheduled Tribe and Category-I candidates are exempted from payment of fees.

**10.** (i) Candidates should submit their applications complete in all respects, together with attested copies of all the testimonials of educational qualifications etc., so as to reach the Registrar General, High Court of Karnataka, High Court Buildings, Bangalore - 560 001 on or before 01.07.2013 [5.00 p.m.]. Envelope containing the application should be superscribed as "Application for recruitment to the post of Driver". Applications received beyond the time so fixed shall be rejected.

(ii) In-service candidates shall submit their applications through their official superiors so as to reach the Registrar General, High Court of Karnataka, High Court Buildings, Bangalore - 560 001, not later than the date and time fixed for receipt of applications.

(iii) If the last date fixed for the receipt of applications happens to be a General Holiday, the next working day will be the last date for receipt of applications.

**11. Application Form:-** Application in the prescribed proforma should be filled in by the candidates in their own handwriting and must be accompanied by the following, failing which their applications will be rejected:-

a) Three Character Certificates, one from the Institution in which he had last studied and two from respectable persons unconnected with his school and not related to him testifying to his character (true copies).

b) True copies of educational qualifications, if any.

c) Copy of Driving License (Copy of Complete Driving Licence).

d) Crossed Indian Postal Order for Rs.150/- (Rupees One Hundred and Fifty) only drawn in favour of Registrar General, High Court of Karnataka, Bangalore. (Scheduled Caste / Scheduled Tribe/Category – I candidates are exempted from payment of fees)

e) Persons claiming the benefit of reservation under Scheduled Caste Category and other backward class category and Rural/Ex-servicemen category shall produce a Certificate in the form prescribed, issued by competent authority.

f) True copy of the Certificate showing the date of birth of the candidate.

**PROFORMA OF THE APPLICATION IS AVAILABLE ON THE WEB SITE OF THE HIGH COURT OF KARNATAKA :- www.karnatakajudiciary.kar.nic.in**

**12.** Intimation for the Test will be sent to the eligible candidates and if any candidate does not get intimation for the Test, it may be presumed that he is not eligible for the Test. No correspondence will be entertained thereafter with the candidates who have not been called for the Test.

***NOTE:*** *Candidates selected for the post of Driver may be posted to work either at High Court of Karnataka, Principal Bench at Bangalore / Circuit Benches at Dharwad and Gulbarga.*

**BY ORDER OF THE HON'BLE CHIEF JUSTICE,**

**L. SUBRAMANYA**
REGISTRAR (ADMINISTRATION)

**FORM OF APPLICATION FOR RECRUITMENT TO THE POSTS OF DRIVERS IN THE HIGH COURT OF KARNATAKA, BANGALORE.**

**HCE 726/2011, dated: 27.08.2013**

PHOTO OF THE APPLICANT

To
The Registrar General,
High Court of Karnataka, Bangalore.

| | | |
|---|---|---|
| 1. | Name of the applicant in full<br>(*in block letters*) | : |
| 2. | Name of father | : |
| 3. | Age and Date of Birth (as mentioned in the SSLC / equivalent certificate / Transfer Certificate) | : |
| 4. | Postal Address<br>(*in block letters*)<br>(a) permanent postal address<br>(b) present postal address<br>Phone Number<br>(1) Landline:-<br>(2) Mobile:- | : |
| 5. | Whether the applicant is presently employed? If so furnish the details of employment and monthly income. | |
| 6. | Occupation of Parents / Guardian. | : |
| 7. | Annual Income of Parents / Guardian. | : |
| 8. | Qualification | : |
| 9. | Driving Licence Number<br>(Specify HMV/LMV)<br>Badge Number:- | |
| 10. | Whether the Applicant belongs to Scheduled Castes / Scheduled Tribes / Category-I / Category-II(a) / II(b) / III(a) / III (b). If so, the same should be indicated. A copy of the Certificate in support of the claim should be attached. | |
| 11. | Whether the applicant has credited the prescribed fee in the form of postal order and whether he has enclosed the same. (mention the postal order number and date). | : |
| 12. | Whether the applicant claims Rural/Ex-servicemen quota and if so, whether relevant certificate is enclosed. | : |
| 13. | Whether the applicant is / was a Party to any Criminal proceedings. If yes, furnish detailed information. | |

I do hereby solemnly and sincerely affirm that the statement made and the information furnished above are true. Should it however be found that any information furnished herein is untrue in material particulars, I realise that I am liable to criminal prosecution and I am also agreeable to forego the claim for public services under the State Government.

PLACE :

DATE :

SIGNATURE OF THE CANDIDATE.

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – I<br>Part – I | ಬೆಂಗಳೂರು, ಸೋಮವಾರ, ಮೇ ೨೭, ೨೦೧೩ (ಜ್ಯೇಷ್ಠ ೬, ಶಕ ವರ್ಷ ೧೯೩೫)<br>Bangalore, Monday, May 27, 2013 (Jyeishta 6, Shaka Varsha 1935) | ನಂ.೮೦೩<br>No. 803 |

## ಕರ್ನಾಟಕ ಸರ್ಕಾರದ ನಡವಳಿಗಳು

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**ವಿಷಯ:** ಶ್ರೀ ರಾಮಚಂದ್ರಗೌಡ, ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ: ಪಿಡಿ 07 ಎಸ್‌ಪಿಬಿ 2013 ದಿನಾಂಕ: 18.01.2013

2) ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ ಇವರ ರಾಜೀನಾಮೆ ಪತ್ರ ಸಂಖ್ಯೆ : SPB/DC/ HO/185/2013 ದಿನಾಂಕ: 15.5.2013

**ಪ್ರಸ್ತಾವನೆ:**

ಶ್ರೀ ರಾಮಚಂದ್ರಗೌಡ, ವಿಧಾನ ಪರಿಷತ್ತಿನ ಸದಸ್ಯರು, ಇವರನ್ನು ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಕ ಮಾಡಲಾಗಿರುತ್ತದೆ.

ಶ್ರೀ ರಾಮಚಂದ್ರಗೌಡ ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ, ಇವರು ಮೇಲೆ ಓದಲಾದ (2)ರ ರಾಜೀನಾಮೆ ಪತ್ರದಲ್ಲಿ ದಿನಾಂಕ: 15.05.2013ರ ಅಪರಾಹ್ನದಂದು ಉಪಾಧ್ಯಕ್ಷರ ಸ್ಥಾನಕ್ಕೆ ರಾಜೀನಾಮೆಯನ್ನು ಸಲ್ಲಿಸುತ್ತಿರುವುದಾಗಿ ತಿಳಿಸಿದ್ದಾರೆ.

ಆದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 07 ಎಸ್‌ಪಿಬಿ 2013, ಬೆಂಗಳೂರು, ದಿನಾಂಕ: 25ನೇ ಮೇ 2013**

ರಾಜ್ಯ ಯೋಜನಾ ಮಂಡಳಿಯ ಮಾನ್ಯ ಉಪಾಧ್ಯಕ್ಷರಾದ ಶ್ರೀ ರಾಮಚಂದ್ರಗೌಡ ಇವರ ರಾಜೀನಾಮೆಯನ್ನು ದಿನಾಂಕ: 15.05.2013ರ ಅಪರಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಷಾಬಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A<br>Part – IV-A | ಬೆಂಗಳೂರು, ಸೋಮವಾರ, ಮೇ ೨೭, ೨೦೧೩ (ಜ್ಯೇಷ್ಠ ೬, ಶಕ ವರ್ಷ ೧೯೩೫)<br>Bangalore, Monday, May 27, 2013 (Jyeishta 6, Shaka Varsha 1935) | ನಂ.೮೦೪<br>No. 804 |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕವಿಪ:ಶಾರಶಾ:295:ವಿಪ.ಸ.ಮು.ಸ.:2013, ಬೆಂಗಳೂರು, ದಿನಾಂಕ: 27ನೇ ಮೇ, 2013**

ಕರ್ನಾಟಕ ವಿಧಾನ ಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧಿನಿಯಮ 2009ರ ಪ್ರಕರಣ 3 (ಸಿಸಿಸಿ) ರೀತ್ಯಾ ವಿಧಾನ ಪರಿಷತ್ತಿನ ಮಾನ್ಯ ವಿರೋಧ ಪಕ್ಷದ ನಾಯಕರು, ವಿಧಾನ ಪರಿಷತ್ತಿನ ಸದಸ್ಯರಾದ ಡಾ: ಎ.ಹೆಚ್. ಶಿವಯೋಗಿಸ್ವಾಮಿ ರವರನ್ನು ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರನ್ನಾಗಿ ಹೆಸರಿಸಿರುವ ಕಾರಣ, ದಿನಾಂಕ: 27.5.2013 ರಿಂದ ಜಾರಿಗೆ ಬರುವಂತೆ ಡಾ: ಎ.ಹೆಚ್. ಶಿವಯೋಗಿಸ್ವಾಮಿರವರನ್ನು ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರನ್ನಾಗಿ ನೇಮಕ ಮಾಡಲಾಗಿದೆ.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL SECRETARIAT

## NOTIFICATION

**No. KLC/Legn/295/O.C.W./2013, Bangalore, dated: 27th May, 2013**

Dr. A.H. Shivayogiswamy, Member, Karnataka Legislative Council, has been designated as Chief Whip of the Opposition party in Legislative Council by the Hon'ble Leader Of Opposition in Legislative Council under sec. 3(ccc) of the

Karnataka Legislature Salaries, Pensions and Allowances (Amendment) Act, 2009. In view of this Dr. A.H. Shivayogiswamy has been appointed as the Chief Whip of the Opposition Party in Legislative Council with effect from 27.05.2013

**V. SHREESH**
Secretary

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಮೇ ೨೮, ೨೦೧೩ (ಜ್ಯೇಷ್ಠ ೭, ಶಕ ವರ್ಷ ೧೯೩೫) | ನಂ. ೮೦೫ |
| **Part – IV-A** | **Bangalore, Tuesday, May 28, 2013 (Jyeishta 7, Shaka Varsha 1935)** | **No. 805** |

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಇ 127 ಎಂಆರ್‌ಇ 2013, ಬೆಂಗಳೂರು, ದಿನಾಂಕ: 27/05/2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ. 1966ರ ಕಲಂ 10** ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ವಿವಿಧ ಅಧಿಸೂಚನೆಗಳ ಮೂಲಕ **ಬಾಗಲಕೋಟೆ, ಬೀಳಗಿ, ಗಂಗಾವತಿ, ಕಾರಟಗಿ, ಸಾಗರ, ಸೊರಬ, ಹೊಸನಗರ, ಶಿವಮೊಗ್ಗ, ತೀರ್ಥಹಳ್ಳಿ, ಹೊಸದುರ್ಗ, ಹೊಳಲ್ಕೆರೆ, ಶೃಂಗೇರಿ, ದೊಡ್ಡಬಳ್ಳಾಪುರ, ಹೊಸಕೋಟೆ, ಗುಲ್ಬರ್ಗಾ, ಸಿಂಧಗಿ, ಇಂಡಿ, ರಾಯಚೂರು ಮತ್ತು ದೇವದುರ್ಗ** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಮಾಡಿರುವ ಎಲ್ಲಾ ನಾಮನಿರ್ದೇಶಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಮೇ ೨೮, ೨೦೧೩ (ಜ್ಯೇಷ್ಠ ೭, ಶಕ ವರ್ಷ ೧೯೩೫) | ನಂ. ೮೦೬ |
| **Part – IV-A** | **Bangalore, Tuesday, May 28, 2013 (Jyeishta 7, Shaka Varsha 1935)** | **No. 806** |

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಓ 15 ಸಿಎಲ್‌ಎಂ 2013, ಬೆಂಗಳೂರು, ದಿನಾಂಕ: 28/05/2013**

ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 17) ರ ಪ್ರಕರಣ 71ರ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳು 2004 ಅನ್ನು ತಿದ್ದುಪಡಿ ಮಾಡಲು ಉದ್ದೇಶಿಸಿದ್ದು ಕೆಳಕಂಡ ಕರಡು ನಿಯಮಗಳನ್ನು ಸದರಿ ಪ್ರಕರಣದ (1) ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಿರುವಂತೆ ಸಾರ್ವಜನಿಕರ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಹಾಗೂ ಸದರಿ ಕರಡು ತಿದ್ದುಪಡಿ ನಿಯಮಗಳಿಂದ ಬಾಧಿತರಾದ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿದ್ದು, ಕರಡು ತಿದ್ದುಪಡಿ ನಿಯಮಗಳನ್ನು ಇವು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ಮೂವತ್ತು ದಿನಗಳ ನಂತರ ಅಂತಿಮಗೊಳಿಸಲು ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಸೂಚಿಸಲಾಗಿದೆ.

ಸದರಿ ಕರಡು ತಿದ್ದುಪಡಿ ನಿಯಮಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿರುವ ಅವಧಿಯೊಳಗಾಗಿ ಯಾವೊಬ್ಬ ವ್ಯಕ್ತಿಯಿಂದ ಯಾವುದೇ ಆಕ್ಷೇಪಣೆ ಅಥವಾ ಸಲಹೆಗಳು ಸ್ವೀಕೃತವಾದಲ್ಲಿ ರಾಜ್ಯ ಸರ್ಕಾರವು ಅವುಗಳನ್ನು ಪರಿಶೀಲಿಸುತ್ತದೆ. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು –1, ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

| | |
|---|---|
| 1. | **ಹೆಸರು ಮತ್ತು ಪ್ರಾರಂಭ:–**<br>(1) ಈ ನಿಯಮಗಳನ್ನು ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.<br>(2) ಇವು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು. |
| 2. | **ನಿಯಮ 2ರ ತಿದ್ದುಪಡಿ:** ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ನಿಯಮಗಳು, 2004 (ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗುತ್ತದೆ) ರ ನಿಯಮ 2ರಲ್ಲಿ,<br>(i) ಖಂಡ (ಎ) ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು; ಎಂದರೆ:–<br>"(ಎಎ) 'ಆಡಳಿತಗಾರ' ಎಂದರೆ ಅಧಿನಿಯಮದ ಪ್ರಕರಣ 38 ಅಥವಾ 57ಎ ಅಡಿ ನೇಮಕವಾದ ಆಡಳಿತಗಾರ. |

(ii) ಖಂಡ(ಜಿ) ನಂತರ, ಈ ಮುಂದಿನದನ್ನು ಸೇರಿಸತಕ್ಕದು; ಎಂದರೆ:–

"(ಜಿ–1) **'ವಿಶೇಷಾಧಿಕಾರಿ'** ಎಂದರೆ ಅಧಿನಿಯಮದ ಪ್ರಕರಣ 38ಎ ಅಡಿ ನೇಮಕವಾದ ವಿಶೇಷಾಧಿಕಾರಿ.

(ಜಿ–2) **'ಜಿಲ್ಲಾ ಚುನಾವಣಾಧಿಕಾರಿ'**– ಎಂದರೆ ಸಹಕಾರ ಚುನಾವಣಾ ಆಯೋಗದಿಂದ ಆ ಜಿಲ್ಲೆಗಾಗಿ ನೇಮಿಸಲ್ಪಟ್ಟ ಒಬ್ಬ ಅಧಿಕಾರಿ.

(ಜಿ–3) **'ರಿಟರ್ನಿಂಗ್ ಅಧಿಕಾರಿ'**– ರಿಟರ್ನಿಂಗ್ ಅಧಿಕಾರಿ ಎಂದರೆ ಸಹಕಾರಿ ಚುನಾವಣಾ ಆಯೋಗದಿಂದ ನೇಮಿಸಲ್ಪಟ್ಟ ರಾಜ್ಯ ಸರ್ಕಾರದ ಅಥವಾ ಸ್ಥಳೀಯ ಸಂಸ್ಥೆಯ ಒಬ್ಬ ಅಧಿಕಾರಿ ಮತ್ತು ರಿಟರ್ನಿಂಗ್ ಅಧಿಕಾರಿಯ ಕರ್ತವ್ಯವನ್ನು ನಿರ್ವಹಿಸುವ ಒಬ್ಬ ಸಹಾಯಕ ರಿಟರ್ನಿಂಗ್ ಅಧಿಕಾರಿಯನ್ನು ಒಳಗೊಳ್ಳುತ್ತದೆ.

3. **ನಿಯಮ 3ರ ತಿದ್ದುಪಡಿ:**– ಸದರಿ ನಿಯಮಗಳ ನಿಯಮ 3ರಲ್ಲಿ,

(i) ಉಪನಿಯಮ (1) ಮತ್ತು (2) ನ್ನು ಅನುಕ್ರಮವಾಗಿ ಉಪನಿಯಮ (2) ಮತ್ತು (3) ಎಂದು ಪುನರ್ ಸಾಂಖ್ಯೀಕರಿಸತಕ್ಕದ್ದು ಮತ್ತು ಹಾಗೇ ಪುನರ್ ಸಾಂಖ್ಯೀಕರಿಸಿದ ಉಪನಿಯಮ (2)ರ ನಿಕಟ ಪೂರ್ವದಲ್ಲಿ ಈ ಕೆಳಗಿನದನ್ನು ಸೇರಿಸತಕ್ಕದ್ದು; ಎಂದರೆ:–

"(1) **ನೋಂದಣಿ ಕಾರ್ಯವಿಧಾನ ಈ ಕೆಳಗಿನಂತಿರತಕ್ಕದ್ದು:–**

(i) ಒಂದು ಸಹಕಾರಿಯನ್ನು ಸಂಘಟಿಸಲು ಬಯಸುವ ಹತ್ತಕ್ಕೆ ಕಡಿಮೆ ಇಲ್ಲದ ವ್ಯಕ್ತಿಗಳ ಗುಂಪೊಂದು ಒಟ್ಟಿಗೆ ಸೇರಿ ಅವರಲ್ಲಿ ಒಬ್ಬ ಮುಖ್ಯ ಪ್ರವರ್ತಕನನ್ನು ಆಯ್ಕೆ ಮಾಡಿ ಅವನಿಗೆ ಸಹಾಯ ಮಾಡಲು ಕೆಲವು ಪ್ರವರ್ತಕರನ್ನು ನೇಮಿಸಿ ಆತನು ಪ್ರಸ್ತಾಪಿತ ಸಹಕಾರಿಯನ್ನು ನೋಂದಾಯಿಸಲು ಕ್ರಮ ತೆಗೆದುಕೊಳ್ಳುವಂತೆ ಅಧಿಕಾರ ನೀಡಬಹುದು. ಅಂತಹ ವ್ಯಕ್ತಿಗಳ ಗುಂಪು ಪ್ರಸ್ತಾಪಿತ ಸಹಕಾರಿಯ ಹೆಸರು ಮತ್ತು ಕಾರ್ಯಕ್ಷೇತ್ರವನ್ನು ನಿರ್ಧರಿಸಿ ಪ್ರಸ್ತಾಪಿತ ಸಹಕಾರಿಯ ಉಪವಿಧಿಗಳನ್ನು ಅಳವಡಿಸಿಕೊಂಡು ಪ್ರಸ್ತಾಪಿತ ಸಹಕಾರಿಯ ಸದಸ್ಯರಾಗಲು ಬಯಸುವ ವ್ಯಕ್ತಿಗಳಿಂದ ಅಗತ್ಯ ಷೇರು ಬಂಡವಾಳವನ್ನು ಸಂಗ್ರಹಿಸಲು ಮುಖ್ಯ ಪ್ರವರ್ತಕನಿಗೆ ಅಧಿಕಾರ ನೀಡಲು ನಿರ್ಣಯಿಸತಕ್ಕದ್ದು.

(ii) ಮುಖ್ಯ ಪ್ರವರ್ತಕನು ಪ್ರಸ್ತಾಪಿತ ಸಹಕಾರಿಯನ್ನು ಸ್ಥಾಪಿಸಲು ಒಟ್ಟು ಗೂಡಿರುವ ವ್ಯಕ್ತಿಗಳ ಪಟ್ಟಿ, ಅಂತಹ ಗುಂಪಿನ ವ್ಯಕ್ತಿಗಳ ಹೆಸರು, ವಿಳಾಸ ಮತ್ತು ಸಹಿಗಳನ್ನು ಸಭಾ ನಡೆವಳಿಗಳ ಪ್ರತಿ, ಪ್ರಸ್ತಾಪಿತ ಸಹಕಾರಿಯ ಉಪವಿಧಿಗಳ ದ್ವಿಪ್ರತಿಗಳು ಮತ್ತು ಪ್ರಸ್ತಾಪಿತ ಸಹಕಾರಿಯು ಯಶಸ್ವಿಯಾಗಿ ಕಾರ್ಯನಿರ್ವಹಿಸುವ ಯುಕ್ತ ಅವಕಾಶಗಳಿರುವ ಮತ್ತು ಅದು ಸದೃಢವಾಗಿ ಬೆಳವಣಿಗೆ ಹೊಂದುವ ಸಾಧ್ಯತೆ ಇದೆ ಎಂಬುದನ್ನು ತೋರಿಸುವ ಪ್ರಾಜೆಕ್ಟ್ ವರದಿಯ ಸಹಿತ ವ್ಯಾಪ್ತಿಯುಳ್ಳ ರಿಜಿಸ್ಟ್ರಾರನನ್ನು ಸಂಪರ್ಕಿಸತಕ್ಕದ್ದು.

(iii) ಪ್ರಸ್ತಾಪಿತ ಸಹಕಾರಿಯು ಯಶಸ್ವಿಯಾಗಿ ಕಾರ್ಯನಿರ್ವಹಿಸುವ ಯುಕ್ತ ಅವಕಾಶಗಳಿವೆ ಹಾಗೂ ಅದು ಆರ್ಥಿಕ ಸದೃಢತೆಯಿಂದ ಬೆಳವಣಿಗೆ ಹೊಂದುವ ಅವಕಾಶಗಳಿವ ಎಂದು ಮನಗಂಡಲ್ಲಿ ರಿಜಿಸ್ಟ್ರಾರನು ಪ್ರಸ್ತಾಪಿತ ಸಹಕಾರಿಯ ಸದಸ್ಯರಾಗಲು ಬಯಸುವ ತಾನು ನಿಗದಿಪಡಿಸುವ ಅಂಥ ಸಂಖ್ಯೆಯ ವ್ಯಕ್ತಿಗಳಿಂದ ಅಂಥ ಷೇರು ಬಂಡವಾಳವನ್ನು ಅಂಥ ಅವಧಿಯೊಳಗೆ ಸಂಗ್ರಹಿಸಲು ಮುಖ್ಯ ಪ್ರವರ್ತಕನಿಗೆ ಅನುಮತಿ ನೀಡಬಹುದು.

(iv) ರಿಜಿಸ್ಟ್ರಾರನಿಂದ ಅನುಮತಿ ಪಡೆದ ನಂತರ, ಮುಖ್ಯ ಪ್ರವರ್ತಕನು ಪ್ರಸ್ತಾಪಿತ ಸಹಕಾರಿಯ ಹೆಸರಿನಲ್ಲಿ ರಶೀದಿ ಪುಸ್ತಕಗಳನ್ನು ಮುದ್ರಣ ಮಾಡಿಸತಕ್ಕದ್ದು ಮತ್ತು ಪ್ರಸ್ತಾಪಿತ ಸಹಕಾರಿಯ ಸದಸ್ಯರಾಗ ಬಯಸುವ ವ್ಯಕ್ತಿಗಳಿಂದ ಷೇರು ಬಂಡವಾಳವನ್ನು ಸಂಗ್ರಹಿಸತಕ್ಕದ್ದು. ಪ್ರಸ್ತಾಪಿತ ಸದಸ್ಯರಿಂದ ಸಂಗ್ರಹಿಸುವ ಮೊಬಲಗಿಗೆ ತನ್ನ ಹೆಸರು, ಪದನಾಮ ಮತ್ತು ಸಹಿಯೊಂದಿಗೆ ರಶೀದಿಗಳನ್ನು ನೀಡತಕ್ಕದ್ದು. ಆತನು ಸಂಗ್ರಹಿಸಿದ ಹಣವನ್ನು ರಿಜಿಸ್ಟ್ರಾರನು ನಿಗದಿಪಡಿಸುವ ಷೆಡ್ಯೂಲ್ಡ್ ಬ್ಯಾಂಕ್ ಅಥವಾ ಸಹಕಾರ ಬ್ಯಾಂಕಿನಲ್ಲಿ ಏಳು ದಿನಗಳೊಳಗೆ ಠೇವಣಿ ಇಡತಕ್ಕದ್ದು. ಆತನು ಒಂದು ನಗದು ಪುಸ್ತಕ, ರಶೀದಿ ಪುಸ್ತಕ, ಓಚರ್ ಪುಸ್ತಕ ಮತ್ತು ತಾನು ಸಂಗ್ರಹಿಸಿ ಬ್ಯಾಂಕಿಗೆ ಪಾವತಿಸಿದ ಹಣಕ್ಕೆ ಇತರ ಲೆಕ್ಕಗಳನ್ನು ನಿರ್ವಹಿಸತಕ್ಕದ್ದು. ಆದಾಗ್ಯೂ ಆತನು ಮುದ್ರಣ, ಲೇಖನ ಸಾಮಗ್ರಿ, ಬೆರಳಚ್ಚು, ಅಂಚೆ ವೆಚ್ಚ, ಇತ್ಯಾದಿ ಪ್ರಾಸಂಗಿಕ ವೆಚ್ಚಗಳನ್ನು ಭರಿಸಲು ಅಗತ್ಯವಿರುವ ಮತ್ತು ತಕ್ಕಷ್ಟಾದ ಹಣವನ್ನು ಉಳಿಸಿಕೊಳ್ಳಲು ಸಕ್ಷಮನಿರುತ್ತಾನೆ.

(v) ನಿರ್ದಿಷ್ಟಪಡಿಸಿದ ಸಂಖ್ಯೆಯ ವ್ಯಕ್ತಿಗಳಿಂದ ರಿಜಿಸ್ಟ್ರಾರನು ಅನುಮತಿಸಿದ ಪ್ರಮಾಣದ ಷೇರು ಬಂಡವಾಳವನ್ನು ಸಂಗ್ರಹಿಸಿದ ನಂತರ, ಮುಖ್ಯ ಪ್ರವರ್ತಕನು ಪ್ರಸ್ತಾಪಿತ ಸಹಕಾರಿಯ ಪ್ರವರ್ತಕರ ಸಭೆಯನ್ನು ಕರೆದು ಅದರಲ್ಲಿ ಷೇರು ಬಂಡವಾಳವನ್ನು ಸಂಗ್ರಹಿಸಿರುವ ಪ್ರಸ್ತಾಪಿತ ಸದಸ್ಯರುಗಳ ಹೆಸರುಗಳನ್ನು ಮತ್ತು ಜಮಾ ಖರ್ಚುಗಳ ವಿವರಗಳನ್ನು ಮಂಡಿಸತಕ್ಕದ್ದು. ಸದರಿ ಪ್ರವರ್ತಕರ ಸಭೆಯಲ್ಲಿ ನಿರ್ಣಯವಾದ ನಂತರ ಪ್ರಸ್ತಾಪಿತ ಸದಸ್ಯರ ಹೆಸರು ವಿಳಾಸಗಳುಳ್ಳ ಪಟ್ಟಿ ಮತ್ತು ಉಪವಿಧಿಗಳ–5 ಪ್ರತಿಗಳ ಸಹಿತ ಪ್ರಸ್ತಾಪಿತ ಸಹಕಾರಿಯ ನೋಂದಣಿಗಾಗಿ ನಿಗದಿತ ಅರ್ಜಿಯಲ್ಲಿ ಪ್ರಸ್ತಾವವನ್ನು ರಿಜಿಸ್ಟ್ರಾರನಿಗೆ ಸಲ್ಲಿಸತಕ್ಕದ್ದು. ಬಿಡಿ ವ್ಯಕ್ತಿಯಾಗಿರುವ ಪ್ರತಿಯೊಬ್ಬ ಅರ್ಜಿದಾರನು ಮತ್ತು ಯಾವುದೇ ಸಹಕಾರಿಯು ಅರ್ಜಿದಾರನಾಗಿದ್ದಲ್ಲಿ ಅದರ ಪರವಾಗಿ ಪ್ರಾಧಿಕೃತನಾದ ವ್ಯಕ್ತಿಯು ಸದರಿ ಅರ್ಜಿಗೆ ಸಹಿ ಮಾಡಿರತಕ್ಕದ್ದು ಮತ್ತು ಸದರಿ ಅರ್ಜಿಯು ನಿಗದಿತ ನೋಂದಣಿ ಶುಲ್ಕವನ್ನು ಪಾವತಿಸಿದ ಚಲನ್ ಅನ್ನು ಒಳಗೊಂಡಿರತಕ್ಕದ್ದು.

ii) ಹಾಗೇ ಪುನರ್ ಸಾಂಖ್ಯೀಕರಿಸಿದ ಉಪನಿಯಮ (3) ರ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು; ಎಂದರೆ:–

**"(4) ಉಪವಿಧಿಗಳು:**

(ಎ) ಸಂಯುಕ್ತ ಸಹಕಾರಿಯನ್ನು ಒಳಗೊಂಡಂತೆ ಪ್ರತಿ ಸಹಕಾರಿಯು ಈ ಅಧಿನಿಯಮ ಮತ್ತು ಅದರಡಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಅನುಗುಣವಾಗಿ ತನ್ನ ಉಪವಿಧಿಗಳನ್ನು ರೂಪಿಸತಕ್ಕದ್ದು.

(ಬಿ) ಅಧಿನಿಯಮ ಮತ್ತು ನಿಯಮಗಳಲ್ಲಿ ನಿಗದಿಪಡಿಸಿದ ನಿರ್ದಿಷ್ಟ ವಿಷಯಗಳನ್ನು ಹೊರತು ಪಡಿಸಿ ಆದರೆ ಅವುಗಳಿಗೆ ವಿರುದ್ಧವಾಗಿರದ ಹೆಚ್ಚಿನ ನಿಯಂತ್ರಕ ವಿಷಯಗಳನ್ನುಳ್ಳ ಉಪವಿಧಿಗಳನ್ನು ರೂಪಿಸಬಹುದಾಗಿದ್ದು ಹಾಗೆ ರೂಪಿಸಲ್ಪಟ್ಟ ಉಪವಿಧಿಗಳಿಂದ ಸಂಯುಕ್ತ ಸಹಕಾರಿಯನ್ನು ಒಳಗೊಂಡಂತೆ ಪ್ರತಿ ಸಹಕಾರಿಯ ಕಾರ್ಯನಿರ್ವಹಣೆಯು ನಿಯಂತ್ರಿತವಾಗತಕ್ಕದ್ದು.

(ಸಿ) ಸಂಯುಕ್ತ ಸಹಕಾರಿಯನ್ನು ಒಳಗೊಂಡಂತೆ ಯಾವುದೇ ಸಹಕಾರಿಯು, ಕಾಲಕಾಲಕ್ಕೆ ಅಧಿನಿಯಮ ಮತ್ತು ಈ ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ತನ್ನ ಉಪವಿಧಿಗಳನ್ನು ತಿದ್ದುಪಡಿ ಮಾಡತಕ್ಕದ್ದು.

ಪರಂತು ಸಂಯುಕ್ತ ಸಹಕಾರಿಯನ್ನೊಳಗೊಂಡಂತೆ ಪ್ರತಿ ಸಹಕಾರಿಯು ಅಧಿನಿಯಮ ಮತ್ತು ನಿಯಮಗಳಿಗೆ ಕಾಲಕಾಲಕ್ಕೆ ಮಾಡಲ್ಪಟ್ಟ ತಿದ್ದುಪಡಿಗಳಿಗೆ ಅನುಗುಣವಾಗಿ ತಿದ್ದುಪಡಿಗಳು ಜಾರಿಗೆ ಬರುವ ದಿನಾಂಕದಿಂದ ತೊಂಭತ್ತು ದಿನಗಳೊಳಗೆ ತನ್ನ ಉಪವಿಧಿಗಳಿಗೆ ಅಗತ್ಯವಾದ ತಿದ್ದುಪಡಿಗಳನ್ನು ಮಾಡಿಕೊಳ್ಳಬಹುದು.

(ಡಿ) ಸಹಕಾರಿಯು ಪಡೆಯಬಹುದಾದ ಸಾಲದ ಪ್ರಮಾಣ ಮತ್ತು ನೀಡಬಹುದಾದ ಸಾಲದ ಪ್ರಮಾಣದ ಕುರಿತು ಉಪವಿಧಿಗಳಲ್ಲಿ ಸೂಕ್ತ ಅವಕಾಶ ಕಲ್ಪಿಸಿಕೊಳ್ಳುವುದು.

(ಇ) ಸಹಕಾರಿ ಮತ್ತು ಸಂಯುಕ್ತ ಸಹಕಾರಿಗಳಲ್ಲಿ ಸಿಬ್ಬಂದಿಗಳ ನೇಮಕಾತಿ ಮತ್ತು ಸೇವೆಗೆ ಸಂಬಂಧಿಸಿದ ನಿಯಮಗಳಿಗೆ ಉಪವಿಧಿಗಳಲ್ಲಿ ಸೂಕ್ತವಾಗಿ ಅವಕಾಶ ಮಾಡಿಕೊಳ್ಳುವುದು.

4. **ನಿಯಮ 5ರ ಪ್ರತಿಯೋಜನೆ :–** ಸದರಿ ನಿಯಮಗಳ ನಿಯಮ 5ಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು; ಎಂದರೆ :–

**"5. ಸಹಕಾರಿಯ ಚುನಾವಣೆ ಆಯೋಗ (ಸಿಇಸಿ): (1)** ಸಹಕಾರ ಚುನಾವಣಾ ಆಯೋಗವು (ಸಿಇಸಿ) ರಾಜ್ಯದಲ್ಲಿನ ಎಲ್ಲಾ ಸಹಕಾರಿಗಳ ಚುನಾವಣೆಗಳನ್ನು ನಡೆಸಲು ಮತ್ತು ತತ್ಸಂಬಂಧದ ಮತದಾರರ ಪಟ್ಟಿಗಳನ್ನು ತಯಾರಿಸಲು ಅಗತ್ಯವಾದ ಸಾಮಾನ್ಯ ಅಥವಾ ವಿಶಿಷ್ಟ ಮಾರ್ಗಸೂಚಿಗಳನ್ನು ರೂಪಿಸತಕ್ಕದ್ದು.

(2) ಆಯೋಗವು ಕಾಲಕಾಲಕ್ಕೆ ಅಗತ್ಯಪಡಿಸುವ ಮಾಹಿತಿ ಮತ್ತು ಕಾಗದ ಪತ್ರಗಳನ್ನು ಪ್ರತಿ ಸಹಕಾರಿಯ ಆಡಳಿತ ಮಂಡಳಿಯು ಆಯೋಗಕ್ಕೆ ಒದಗಿಸತಕ್ಕದ್ದು.

**5ಎ. ಆಡಳಿತ ಮಂಡಳಿಗಳಿಗೆ ಸಾಮಾನ್ಯ ಚುನಾವಣೆ ನಡೆಸುವುದು:** (1) ಸಹಕಾರ ಚುನಾವಣಾ ಆಯೋಗದ ಮೇಲುಸ್ತುವಾರಿ, ನಿರ್ದೇಶನ ಮತ್ತು ನಿಯಂತ್ರಣಕ್ಕೆ ಒಳಪಟ್ಟು ಪ್ರತಿ ಜಿಲ್ಲೆಯ ಸಹಕಾರಿಗಳ ಜಿಲ್ಲಾ ಚುನಾವಣಾಧಿಕಾರಿ ಜಿಲ್ಲೆಯೊಳಗೆ ನೋಂದಾಯಿತ ಕಚೇರಿಗಳನ್ನು ಮತ್ತು ವ್ಯವಹಾರದ ಪ್ರಧಾನ ಸ್ಥಳಗಳನ್ನುಳ್ಳ ಸಹಕಾರಿಗಳ ಸಾಮಾನ್ಯ ಚುನಾವಣೆಗಳನ್ನು ನಡೆಸುವುದಕ್ಕೆ ಮತ್ತು ತತ್ಸಂಬಂಧ ಮತದಾರರ ಪಟ್ಟಿಗಳನ್ನು ತಯಾರಿಸುವುದಕ್ಕೆ ಸಂಬಂಧಿಸಿದಂತೆ ಎಲ್ಲಾ ಕೆಲಸಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಮೇಲ್ವಿಚಾರಣೆ ನಡೆಸತಕ್ಕದ್ದು. ಜಿಲ್ಲಾ ಚುನಾವಣಾಧಿಕಾರಿ, ಸದರಿ ಸಾಮಾನ್ಯ ಚುನಾವಣೆಗಳನ್ನು ನಡೆಸುವುದಕ್ಕೆ ಮತ್ತು ಮತದಾರರ ಪಟ್ಟಿಗಳ ತಯಾರಿಸುವುದಕ್ಕೆ ಸಂಬಂಧಿಸಿದಂತೆ, ಸಹಕಾರಿ ಚುನಾವಣಾ ಆಯೋಗ ತನಗೆ ವಹಿಸಿಕೊಡಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

ಸಹಕಾರಿ ಚುನಾವಣಾ ಆಯೋಗವು ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ ದಿನಾಂಕದಿಂದ ಚುನಾವಣಾ ಪ್ರಕ್ರಿಯೆಯು ಪೂರ್ಣಗೊಂಡು ತತ್ಸಂಬಂಧದ ಫಲಿತಾಂಶ ಘೋಷಣೆಯಾಗುವವರೆಗೆ ಜಿಲ್ಲಾ ಚುನಾವಣಾಧಿಕಾರಿ ಜಿಲ್ಲೆಯಲ್ಲಿ ಚುನಾವಣಾ ಕೆಲಸಕ್ಕೆ ನಿಯೋಜಿಸಲ್ಪಟ್ಟ ಸರ್ಕಾರಿ ಅಧಿಕಾರಿಗಳು ಮತ್ತು ನೌಕರರು ಆಯೋಗಕ್ಕೆ ನಿಯೋಜಿಸಲ್ಪಟ್ಟಿದ್ದಾರೆಂದು ಭಾವಿಸತಕ್ಕದ್ದು.

**5ಬಿ. ಮತದಾರರ ಪಟ್ಟಿ ತಯಾರಿಕೆ ಮತ್ತು ಚುನಾವಣಾ ಪ್ರಕ್ರಿಯೆ:–** (1) ಕೂಲಂಕುಷ ಪರಿಶೀಲನೆಯ ನಂತರ, ಜಿಲ್ಲಾ ಚುನಾವಣಾಧಿಕಾರಿ ಆಡಳಿತಮಂಡಳಿಗಳಿಗೆ ಪದಾವಧಿ ಮುಕ್ತಾಯವಾಗುವ ದಿನಾಂಕದ ಕನಿಷ್ಠ 120 ದಿನಗಳ ಪೂರ್ವದಲ್ಲಿ ಸಹಕಾರಿ ಚುನಾವಣಾ ಆಯೋಗಕ್ಕೆ ಕೆಳಕಂಡ ವಿವರಗಳನ್ನೊಳಗೊಂಡ, ಸಾಮಾನ್ಯ ಚುನಾವಣೆಗಳು ಸನ್ನಿಹಿತವಾಗಿರುವ ಎಲ್ಲಾ ಸಹಕಾರಿಗಳ ಕ್ರೋಢೀಕೃತ ಪಟ್ಟಿಯೊಂದನ್ನು ಕಳುಹಿಸತಕ್ಕದ್ದು:

(ಎ) ಸಹಕಾರಿಯ ಹೆಸರು ಮತ್ತು ವಿಳಾಸ;

(ಬಿ) ಆಡಳಿತ ಮಂಡಳಿಗೆ ಆಯ್ಕೆಯಾಗಬೇಕಾಗಿರುವ ನಿರ್ದೇಶಕರ ಸಂಖ್ಯೆ;

(ಸಿ) ಆಡಳಿತ ಮಂಡಳಿಯ ಪದಾವಧಿಯು ಮುಕ್ತಾಯವಾಗುವ ದಿನಾಂಕ;

(ಡಿ) ಚುನಾವಣೆಗಳನ್ನು ನಡೆಸಬಹುದಾದ ಸ್ಥಳ ಹಾಗೂ ಚುನಾವಣಾ ಆಯೋಗಕ್ಕೆ ಅವಶ್ಯವಿರುವ ಇತರೆ ಮಾಹಿತಿಗಳು.

(2) ಸಹಕಾರಿ ಚುನಾವಣಾ ಆಯೋಗವು ಜಿಲ್ಲಾ ಚುನಾವಣಾಧಿಕಾರಿಯಿಂದ ಸಾಮಾನ್ಯ ಚುನಾವಣೆಗಳು ಸನ್ನಿಹಿತವಾಗಿರುವ ಸಹಕಾರಿಗಳ ಪಟ್ಟಿಯನ್ನೊಳಗೊಂಡ ಅಂಥ ವರದಿಗಳು ಸ್ವೀಕೃತವಾದ ನಂತರ, ಜಿಲ್ಲೆಯೊಳಗಿನ ಪ್ರತಿ ಸಹಕಾರಿಯ ಹೆಸರು ಮತ್ತು ವಿಳಾಸ ಹಾಗೂ ಸಾಮಾನ್ಯ ಚುನಾವಣೆಯ ದಿನಾಂಕ ಮತ್ತು ಸ್ಥಳಗಳನ್ನು ತಿಳಿಸುವ, ಆಡಳಿತ ಮಂಡಳಿಗಳ ಸಾಮಾನ್ಯ ಚುನಾವಣೆಗಳನ್ನು ನಡೆಸುವ ಮತ್ತು ಮತದಾರರ ಪಟ್ಟಿಗಳನ್ನು ತಯಾರಿಸುವ ಸಂಬಂಧದಲ್ಲಿ ವೇಳಾಪಟ್ಟಿಗಳನ್ನು ಪ್ರಕಟಿಸತಕ್ಕದ್ದು.

(3) (ಎ) ಸಹಕಾರ ಚುನಾವಣಾ ಆಯೋಗವು ಮತ ನೀಡುವ ಹಕ್ಕುಳ್ಳ / ಸುಸ್ತಿದಾರರ ಹಾಗೂ ಸುಸ್ತಿಯಾಗುವವರ ಕರಡು ಪಟ್ಟಿಯನ್ನು ಚುನಾವಣಾ ದಿನಾಂಕಕ್ಕೆ ಮುಂಚಿತವಾಗಿ ಪ್ರಕಟಿಸಿ, ಆಕ್ಷೇಪಣೆ ಕರೆಯುವುದು.

(ಬಿ) ಅಂತಿಮ ಅರ್ಹ ಮತದಾರರ ಪಟ್ಟಿಯನ್ನು ಚುನಾವಣಾ ದಿನಾಂಕಕ್ಕೆ ಹದಿನಾಲ್ಕು ದಿನಗಳ ಪೂರ್ವದಲ್ಲಿ ಪ್ರಕಟಿಸತಕ್ಕದ್ದು.

ಪರಂತು, ಪ್ರತಿ ಸಹಕಾರಿಯ ಮತನೀಡುವ ಹಕ್ಕುಳ್ಳ ಸದಸ್ಯರ / ಪ್ರತಿನಿಧಿ / ಡೆಲಿಗೇಟುಗಳ ಕರಡು ಅರ್ಹತಾಪಟ್ಟಿ, ಸಹಕಾರಿಯ ಸುಸ್ತಿದಾರರ ಕರಡು ಪಟ್ಟಿ ಹಾಗೂ ಮತದಾನದ ಹಕ್ಕನ್ನು ಹೊಂದಿರದ ಇತರ ಸದಸ್ಯರ / ಪ್ರತಿನಿಧಿ / ಡೆಲಿಗೇಟುಗಳ ಕರಡು ಪಟ್ಟಿಗಳನ್ನು ಹಾಗೂ ಮತದಾರರ ಅಂತಿಮ ಪಟ್ಟಿ ಮತ್ತು ಚುನಾವಣಾ ವೇಳಾಪಟ್ಟಿಗಳನ್ನು ಸಂಬಂಧಪಟ್ಟ ಸಹಕಾರಿಯ ಸೂಚನಾಫಲಕದಲ್ಲಿ, ಸ್ಥಳೀಯ ಪಂಚಾಯಿತಿ ಕಚೇರಿಯ ಸೂಚನಾಫಲಕದಲ್ಲಿ, ಸಹಕಾರ ಇಲಾಖೆಯ ಸ್ಥಳೀಯ ಅಧಿಕಾರಿಯ ಸೂಚನಾಫಲಕದಲ್ಲಿ ಪ್ರಕಟಿಸತಕ್ಕದ್ದು.

(4) ಸಹಕಾರಿ ಚುನಾವಣಾ ಆಯೋಗದ ನಿರ್ದೇಶನದಂತೆ ಜಿಲ್ಲಾ ಚುನಾವಣಾಧಿಕಾರಿಗಳು ಮತದಾರರ ಪಟ್ಟಿ ತಯಾರಿಸಲು ಪ್ರತಿ ಸಹಕಾರಿಯು ನೈಜ ಮಾಹಿತಿಯನ್ನು ಜಿಲ್ಲಾ ಚುನಾವಣಾಧಿಕಾರಿಗೆ ಒದಗಿಸತಕ್ಕದ್ದು.

(5) ಪ್ರತಿ ಸಹಕಾರಿಯ ಮುಖ್ಯ ಕಾರ್ಯನಿರ್ವಾಹಕನು ಇಂದೀಕರಿಸಲ್ಪಟ್ಟ ಸದಸ್ಯತ್ವ ರಿಜಿಸ್ಟರಿನಲ್ಲಿ ದಾಖಲಿಸಲಾದ ನಮೂದುಗಳ ಆಧಾರದ ಮೇಲೆ ಚುನಾವಣೆಯಲ್ಲಿ ಮತನೀಡುವ ಹಕ್ಕುಳ್ಳ ಸದಸ್ಯರ ಹಾಗೂ ಸದಸ್ಯ ಸಹಕಾರಿಗಳ ಮತ ನೀಡುವ ಹಕ್ಕುಳ್ಳ ಡೆಲಿಗೇಟುಗಳ ಕರಡು ಅರ್ಹತಾಪಟ್ಟಿಯನ್ನು, ಸಹಕಾರಿಯ ಸುಸ್ತಿದಾರರ ಕರಡು ಪಟ್ಟಿ ಹಾಗೂ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ಹೊಂದಿರದ ಇತರ ಸದಸ್ಯರ / ಪ್ರತಿನಿಧಿ / ಡೆಲಿಗೇಟುಗಳ ಕರಡು ಪಟ್ಟಿಗಳನ್ನು ತಯಾರಿಸತಕ್ಕದ್ದು ಮತ್ತು ಆ ಪಟ್ಟಿಯಲ್ಲಿ,-

(ಎ) ಬಿಡಿ ವ್ಯಕ್ತಿಯ ಸದಸ್ಯನ ಸಂಬಂಧದಲ್ಲಿ, ಸದಸ್ಯನ ಅಥವಾ ಪ್ರತಿನಿಧಿಯ ಹೆಸರು, ಪ್ರವೇಶತ್ವದ ಸಂಖ್ಯೆ, ಹೆತ್ತವರ ಅಥವಾ ಪತಿಯ ಹೆಸರು ಹಾಗೂ ಅಂಥ ಸದಸ್ಯನ ಅಥವಾ ಪ್ರತಿನಿಧಿಯ ವಿಳಾಸ;

(ಬಿ) ಸದಸ್ಯ ಸಹಕಾರಿಯ ಸಂಬಂಧದಲ್ಲಿ, ಪ್ರವೇಶತ್ವ ಸಂಖ್ಯೆ, ಸಹಕಾರಿಯ ಹೆಸರು, ಸಹಕಾರಿಯನ್ನು ಪ್ರತಿನಿಧಿಸಲು ಉದ್ದೇಶಿಸಿರುವ ಡೆಲಿಗೇಟಿನ / ಪ್ರತಿನಿಧಿ ಹೆಸರು ಇರತಕ್ಕದ್ದು.

(ಸಿ) ಮತ್ತು ಅಂಥ ಪಟ್ಟಿಗಳನ್ನು ಅಂಥ ಇಂದೀಕರೀಸಿದ ದಾಖಲೆಗಳ ಮತ್ತು ರಿಜಿಸ್ಟರುಗಳ ಸಹಿತ ಜಿಲ್ಲಾ ಚುನಾವಣಾಧಿಕಾರಿಯ ವಶಕ್ಕೆ ಒಪ್ಪಿಸತಕ್ಕದ್ದು.

(6) ಸಹಕಾರಿಯ ಮುಖ್ಯಕಾರ್ಯನಿರ್ವಾಹಕನು ಸದಸ್ಯ ಸಹಕಾರಿಯ ಅಧಿಕೃತ ಸದಸ್ಯನ ಹೆಸರನ್ನು ಡೆಲಿಗೇಟ್ ಆಗಿ ಸಹಕಾರಿಯ ಮೊಹರನ್ನು ಒಳಗೊಂಡ ಮತ್ತು ಕ್ರಮಬದ್ಧವಾಗಿ ದೃಢೀಕರಿಸಿದ ಅಂಥ ಸಹಕಾರಿಯ ಆಡಳಿತ ಮಂಡಳಿಯ ನಿರ್ಣಯ ಮತ್ತು ಅಧಿಕೃತ ಸದಸ್ಯನ (ಡೆಲಿಗೇಟ್‌ನ) / ಪ್ರತಿನಿಧಿ ಸದಸ್ಯರ ಮಾದರಿ ಸಹಿ ಮತ್ತು ಹೆಸರನ್ನು ದೃಢೀಕರಿಸಿದ ನಿರ್ಣಯ ಸಹಿತ ಪತ್ರವನ್ನು ನಿಗದಿತ ದಿನಾಂಕದೊಳಗೆ ಹಿಂದಿನ ಉಪನಿಯಮದಂತೆ ಜಿಲ್ಲಾ ಚುನಾವಣಾಧಿಕಾರಿಗೆ ಒಪ್ಪಿಸತಕ್ಕದ್ದು.

(7) ಅಂತಿಮ ಮತದಾರರ ಪಟ್ಟಿಯು ಕೆಳಗಿನವುಗಳನ್ನು ಒಳಗೊಂಡಿರತಕ್ಕದ್ದು:

(ಎ) ಪ್ರಾಥಮಿಕ ಸಹಕಾರಿಯ ಸಂಬಂಧದಲ್ಲಿ, ಮತದಾನದ ಹಕ್ಕುಳ್ಳ ಎಲ್ಲಾ ಬಿಡಿ ಸದಸ್ಯರು; ಅಥವಾ

(ಬಿ) ಮಾಧ್ಯಮಿಕ ಸಹಕಾರಿಯ ಸಂಬಂಧದಲ್ಲಿ, ಮತದಾನದ ಹಕ್ಕುಳ್ಳ ಎಲ್ಲಾ ಬಿಡಿ ಸದಸ್ಯರು ಮತ್ತು ಸದಸ್ಯ ಸಹಕಾರಿಗಳ ಪ್ರತಿನಿಧಿಗಳು; ಅಥವಾ

(ಸಿ) ಒಂದು ಒಕ್ಕೂಟ ಮತ್ತು ಅಪೆಕ್ಸ್ ಸಹಕಾರಿಯ ಸಂಬಂಧದಲ್ಲಿ, ಮತದಾನದ ಹಕ್ಕುಳ್ಳ ಸದಸ್ಯ ಸಹಕಾರಿಗಳ ಎಲ್ಲಾ ಪ್ರತಿನಿಧಿ ಸದಸ್ಯರು.

(8) ಪ್ರತಿ ಸಹಕಾರಿಯ ಅಂಥ ಮತದಾರರ ಪಟ್ಟಿಯ ಪ್ರತಿಯನ್ನು ಅಂಥ ಸಹಕಾರಿಯ ಕಚೇರಿಯಲ್ಲಿ ಮತ್ತು ಜಿಲ್ಲಾ ಚುನಾವಣಾಧಿಕಾರಿಯ ಕಚೇರಿಯಲ್ಲಿ ವೀಕ್ಷಣೆಗೆ ಮುಕ್ತವಾಗಿಟ್ಟಿರತಕ್ಕದ್ದು.

(9) ಆಡಳಿತ ಮಂಡಳಿಯ ನಿರ್ದೇಶಕರನ್ನು ಚುನಾಯಿಸಲು ಚುನಾವಣಾ ವೇಳಾಪಟ್ಟಿ ಕೆಳಕಂಡಂತಿರತಕ್ಕದ್ದು.

(ಎ) ನಾಮಪತ್ರ ಸ್ವೀಕರಿಸಲು ಚುನಾವಣೆ ಅಧಿಸೂಚನೆ ದಿನಾಂಕ

(ಬಿ) ನಾಮಪತ್ರ ಸ್ವೀಕರಿಸಲು ಕೊನೆಯ ದಿನಾಂಕ

(ಸಿ) ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ಸಮಯ

(ಡಿ) ಕ್ರಮಬದ್ಧ ನಾಮಪತ್ರ ಸಲ್ಲಿಸಿದ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸುವ ದಿನಾಂಕ ಮತ್ತು ಸಮಯ

(ಇ) ನಾಮಪತ್ರಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ಸಮಯ

(ಎಫ್) ಕ್ರಮಬದ್ಧ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸುವ ದಿನಾಂಕ ಮತ್ತು ಸಮಯ

(ಜಿ) ಅಭ್ಯರ್ಥಿಗಳಿಗೆ ಚಿಹ್ನೆ ಹಂಚಿಕೆ ಹಾಗೂ ಸ್ಪರ್ಧಿಸುವ ಅಭ್ಯರ್ಥಿಗಳ ಚಿಹ್ನೆಗಳ ಸಹಿತ ಪಟ್ಟಿಯ ಪ್ರಕಟಣೆ ದಿನಾಂಕ ಮತ್ತು ಸಮಯ

(ಹೆಚ್) ಮತದಾನದ ಸ್ಥಳ ದಿನಾಂಕ ಮತ್ತು ಸಮಯ

(ಐ) ಮತ ಏಣಿಕೆಯ ಸ್ಥಳ ದಿನಾಂಕ ಮತ್ತು ಸಮಯ

**5ಸಿ. ರಿಟರ್ನಿಂಗ್ ಅಧಿಕಾರಿ ಮತ್ತು ಅವರ ಪ್ರಕಾರ್ಯಗಳು :**

(1) ಸಹಕಾರಿಗಳ ಪ್ರತಿನಿಧಿ ಚುನಾವಣೆ ಅಥವಾ ಆಡಳಿತ ಮಂಡಳಿಯ ನಿರ್ದೇಶಕರ ಚುನಾವಣೆ ಅಥವಾ ಪದಾಧಿಕಾರಿಗಳ ಚುನಾವಣೆ ಅಥವಾ ಪ್ರತಿನಿಧಿ / ನಿರ್ದೇಶಕರ / ಪದಾಧಿಕಾರಿಗಳ ಆಕಸ್ಮಿಕ ರಿಕ್ತ ಸ್ಥಾನಗಳಿಗೆ ಚುನಾವಣೆ ನಡೆಸಲು ಸಹಕಾರ ಚುನಾವಣಾ ಆಯೋಗವು ರಿಟರ್ನಿಂಗ್ ಅಧಿಕಾರಿ ಮತ್ತು ಅವಶ್ಯವಿದ್ದಷ್ಟು ಸಹಾಯಕ ರಿಟರ್ನಿಂಗ್ ಅಧಿಕಾರಿಗಳನ್ನು ನೇಮಿಸುವುದು.

(2) ರಿಟರ್ನಿಂಗ್ ಅಧಿಕಾರಿಯು ಈ ಕೆಳಗಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು:–

(i) ಸಹಕಾರಿ ಚುನಾವಣಾ ಆಯೋಗದ ಅನುಮೋದನೆಗೆ ಒಳಪಟ್ಟು, ರಿಟರ್ನಿಂಗ್ ಅಧಿಕಾರಿಯ ಸಾಮಾನ್ಯ ಚುನಾವಣೆಯನ್ನು ನಡೆಸಲು ಪೂರ್ಣ ಕಾಲಾವಧಿಯ ಶೆಡ್ಯೂಲನ್ನು ತಯಾರಿಸಿ ಪ್ರಕಟಿಸತಕ್ಕದ್ದು.

(ii) ಸಹಕಾರಿ ಚುನಾವಣಾ ಆಯೋಗವು ನಿರ್ದೇಶಿಸುವಂತ ರೀತಿಯಲ್ಲಿ ರಿಟರ್ನಿಂಗ್ ಅಧಿಕಾರಿಯು ಜಿಲ್ಲಾ ಚುನಾವಣಾಧಿಕಾರಿಯೊಡನೆ ಸಮಾಲೋಚಿಸಿ ಸಾಕಷ್ಟು ಸಂಖ್ಯೆಯ ಮತದಾನ ಕೇಂದ್ರಗಳನ್ನು ಒದಗಿಸಲು ವ್ಯವಸ್ಥೆ ಮಾಡಬಹುದು.

(iii) ಉಪನಿಯಮ (1)ರಡಿ ನೇಮಕವಾದ ರಿಟರ್ನಿಂಗ್ ಅಧಿಕಾರಿಯು ನಿರ್ದೇಶಕರ ಚುನಾವಣೆಯ ಉದ್ದೇಶಕ್ಕಾಗಿ ಚುನಾವಣಾ ವೇಳಾಪಟ್ಟಿಯನ್ನು ಸಾಮಾನ್ಯ ಚುನಾವಣಾ ದಿನಾಂಕದ ಕನಿಷ್ಠ ಹದಿನೈದು ದಿನಗಳ ಪೂರ್ವದಲ್ಲಿ ಪ್ರಕಟಿಸತಕ್ಕದ್ದು. ರಿಟರ್ನಿಂಗ್ ಅಧಿಕಾರಿಯ ಅಥವಾ ಸಹಾಯಕ ರಿಟರ್ನಿಂಗ್ ಅಧಿಕಾರಿಯ ಸಹಿಯಲ್ಲಿ ಸಾಮಾನ್ಯ ಚುನಾವಣೆಯ ನೋಟಿಸನ್ನು ಚುನಾವಣಾ ವೇಳಾಪಟ್ಟಿ ಸಹಿತ ಎಲ್ಲಾ ಅರ್ಹ ಸದಸ್ಯರಿಗೆ ಕೆಳಗಿನ ರೀತಿಯಲ್ಲಿ ಕಳುಹಿಸತಕ್ಕದ್ದು:

(ಎ) ಆರ್ಡಿನರಿ ಪೋಸ್ಟ್; ಅಥವಾ

(ಬಿ) ಇ–ಮೇಲ್ / ಎಸ್ಎಂಎಸ್; ಅಥವಾ

(ಸಿ) ಸೂಕ್ತ ಸ್ವೀಕೃತಿಯೊಂದಿಗೆ ಸ್ಥಳೀಯವಾಗಿ ತಲುಪಿಸುವ ಮೂಲಕ; ಮತ್ತು

(ಡಿ) ಕಾರ್ಯಕ್ಷೇತ್ರದಲ್ಲಿ ಹೆಚ್ಚು ಪರಿಚಲನೆಯಲ್ಲಿರುವ ವೃತ್ತ ಪತ್ರಿಕೆಯಲ್ಲಿ ಪ್ರಕಟಿಸುವ ಮೂಲಕ.

(iv) ಚುನಾವಣಾ ವೇಳಾಪಟ್ಟಿಯ ಸಹಿತ ಸಾಮಾನ್ಯ ಚುನಾವಣಾ ನೋಟಿಸನ್ನು ಸಹಕಾರಿಯ ಮತ್ತು ಅದರ ಶಾಖೆಗಳ ಸೂಚನಾಫಲಕಗಳಲ್ಲಿ, ಸ್ಥಳೀಯ ಪಂಚಾಯಿತಿಯ ಸೂಚನಾಫಲಕದಲ್ಲಿ, ರಿಟರ್ನಿಂಗ್ ಅಧಿಕಾರಿಯ ಕಚೇರಿಯ ಸೂಚನಾಫಲಕದಲ್ಲಿ ಮತ್ತು ಜಿಲ್ಲಾ ಚುನಾವಣಾಧಿಕಾರಿಯ ಸೂಚನಾಫಲಕದಲ್ಲಿ ಪ್ರಕಟಿಸತಕ್ಕದ್ದು. ಸಾಮಾನ್ಯ ಚುನಾವಣಾ ನೋಟೀಸು ಕೆಳಗಿನ ಹೆಚ್ಚುವರಿ ಮಾಹಿತಿಯನ್ನು ಒಳಗೊಂಡಿರತಕ್ಕದ್ದು:–

(ಎ) ಸಾಮಾನ್ಯ ಚುನಾವಣೆಯಲ್ಲಿ ಭರ್ತಿಮಾಡಬೇಕಾದ ಸ್ಥಾನಗಳ ಸಂಖ್ಯೆ;

(ಬಿ) ನಿರ್ದೇಶಕರಗಳನ್ನು ಚುನಾಯಿಸಬೇಕಾದ ಪ್ರದೇಶ ಅಥವಾ ಮತಕ್ಷೇತ್ರ (ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ);

(ಸಿ) ಅಧಿನಿಯಮದಲ್ಲಿ, ನಿಯಮಗಳಲ್ಲಿ ಮತ್ತು ಉಪವಿಧಿಗಳಲ್ಲಿ ಆಡಳಿತ ಮಂಡಳಿಯ ಸದಸ್ಯನಾಗಿ ಚುನಾಯಿತರಾಗಲು ನಿರ್ದಿಷ್ಟಪಡಿಸಲಾದ ಅರ್ಹತೆಗಳು;

(3) ಪ್ರತಿಸಹಕಾರಿಯ ಮುಖ್ಯಕಾರ್ಯನಿರ್ವಾಹಕನು ಚುನಾವಣೆ ಸಂಬಂಧದಲ್ಲಿ ರಿಟರ್ನಿಂಗ ಅಧಿಕಾರಿ ಅಪೇಕ್ಷಿಸುವ ಸೂಕ್ತವಾದ ಸಹಾಯ ಮತ್ತು ನೆರವನ್ನು ಒದಗಿಸತಕ್ಕದ್ದು.

(v) ಸಾಮಾನ್ಯ ಚುನಾವಣೆಗಳನ್ನು ನಿಯಮಗಳಲ್ಲಿ ತಿಳಿಸಿರುವ ರೀತಿಯಲ್ಲಿ ಪರಿಣಾಮಕಾರಿಯಾಗಿ ನಡೆಸಲು ಅಗತ್ಯವಾದ ಕೆಳಗಿನ ಕೃತ್ಯಗಳನ್ನು ಮಾಡುವುದು ರಿಟರ್ನಿಂಗ್ ಅಧಿಕಾರಿಯ ಸಾಮಾನ್ಯ ಕರ್ತವ್ಯವಾಗಿರತಕ್ಕದ್ದು, ಎಂದರೆ:–

(ಎ) ನಾಮಪತ್ರಗಳನ್ನು ಆಹ್ವಾನಿಸಿ ನೋಟೀಸು ನೀಡುವುದು;

(ಬಿ) ನಾಮಪತ್ರಗಳನ್ನು ಸ್ವೀಕರಿಸುವುದು ಮತ್ತು ಪರಿಶೀಲಿಸುವುದು;

(ಸಿ) ಸ್ಪರ್ಧಿಸುವ ಅಭ್ಯರ್ಥಿಗಳಿಗೆ ಚಿಹ್ನೆಗಳನ್ನು ಹಂಚಿಕೆ ಮಾಡುವುದು;

(ಡಿ) ಸ್ಪರ್ಧಿಸುವ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸುವುದು;

(ಇ) ಮತದಾನ ಕೇಂದ್ರಗಳ ವ್ಯವಸ್ಥೆ ಮಾಡುವುದು;

(ಎಫ್) ಮತದಾನ ಕೇಂದ್ರಗಳಿಗೆ ಸಿಬ್ಬಂದಿಯನ್ನು ಕಳುಹಿಸಲು ವ್ಯವಸ್ಥೆ ಮಾಡುವುದು;

(ಜಿ) ಮತಪೆಟ್ಟಿಗೆಗಳನ್ನು ಒದಗಿಸಲು ವ್ಯವಸ್ಥೆ ಮಾಡುವುದು;

(ಹೆಚ್) ಮತಪತ್ರಗಳನ್ನು ಮುದ್ರಿಸಲು ವ್ಯವಸ್ಥೆ ಮಾಡುವುದು;

(ಐ) ಅಗತ್ಯಬಿದ್ದರೆ ವಿವಿಧ ಮತದಾನ ಕೇಂದ್ರಗಳ ಫಲಿತಗಳನ್ನು ಸಂಕಲಿಸುವುದು;

(ಜೆ) ಚುನಾವಣೆಯ ಫಲಿತಾಂಶವನ್ನು ಘೋಷಿಸುವುದು ಮತ್ತು ಚುನಾವಣಾ ಪ್ರಮಾಣ ಪತ್ರವನ್ನು ನೀಡುವುದು.

(vi) ರಿಟರ್ನಿಂಗ್ ಅಧಿಕಾರಿಯು ಚುನಾವಣೆಯ ಸಂಬಂಧದಲ್ಲಿ ಚುನಾವಣಾ ಸಿಬ್ಬಂದಿಗಳಿಂದ ಬರುವ ಕಾಗದಪತ್ರಗಳನ್ನು ಸ್ವೀಕರಿಸತಕ್ಕದ್ದು.

(vii) ರಿಟರ್ನಿಂಗ್ ಅಧಿಕಾರಿಯು ತನ್ನ ಕರ್ತವ್ಯ ನಿರ್ವಹಣೆಗೆ ಅಗತ್ಯವಾದಲ್ಲಿ ಸಹಾಯಕ ರಿಟರ್ನಿಂಗ್ ಅಧಿಕಾರಿಗಳ ಮತ್ತು ಚುನಾವಣಾ ಸಿಬ್ಬಂದಿಯ (ತನ್ನ ಕಚೇರಿಯ ಸಿಬ್ಬಂದಿಯನ್ನು ಒಳಗೊಂಡಂತೆ) ನೆರವನ್ನು ಚುನಾವಣಾ ಆಯೋಗದ ಅನುಮತಿಗೊಳಪಟ್ಟು ಪಡೆಯಬಹುದು.

(viii) ರಿಟರ್ನಿಂಗ್ ಅಧಿಕಾರಿಯು ತನ್ನ ವ್ಯಾಪ್ತಿಯಲ್ಲಿ ಬರುವ ಯಾವುದೇ ಸಹಕಾರಿಯ ಸಾಮಾನ್ಯ ಚುನಾವಣೆಯಲ್ಲಿ ಕಾನೂನು ಸುವ್ಯವಸ್ಥೆ ಪಾಲನೆಗಾಗಿ ಜಿಲ್ಲೆ ಆಡಳಿತದೊಡನೆ ಸಂಪರ್ಕವಿಟ್ಟಿರತಕ್ಕದ್ದು.

(ix) ಚುನಾವಣಾ ಆಯೋಗವು ಕಾಲಕಾಲಕ್ಕೆ ನಿರ್ದೇಶಿಸಿದಂತೆ ರಿಟರ್ನಿಂಗ್ ಅಧಿಕಾರಿಯು ಸಹಕಾರಿ ಚುನಾವಣಾ ಆಯೋಗಕ್ಕೆ ವರದಿ / ರಿಟರ್ನ್‌ಗಳನ್ನು ಸಲ್ಲಿಸತಕ್ಕದ್ದು.

(x) ಚುನಾವಣೆಗೆ ಸಂಬಂಧಪಟ್ಟ ಎಲ್ಲ ಸಂಗತವಾದ ಚುನಾವಣಾ ದಾಖಲೆಗಳನ್ನು ಸೂಕ್ತ ಸ್ವೀಕೃತಿಯೊಂದಿಗೆ ಸಂಬಂಧಪಟ್ಟ ಸಹಕಾರಿಯ ಸುಪರ್ದಿನಲ್ಲಿ ಸಂರಕ್ಷಿಸತಕ್ಕದ್ದು, ಆದರೆ ಅಸಾಧಾರಣ ಸಂದರ್ಭಗಳಲ್ಲಿ, ಚುನಾವಣಾ ಆಯೋಗ ಅಥವಾ ರಿಟರ್ನಿಂಗ್ ಅಧಿಕಾರಿ ಅಥವಾ ಸಹಾಯಕ ರಿಟರ್ನಿಂಗ್ ಅಧಿಕಾರಿಯು ಅಂಥ ದಾಖಲೆಗಳನ್ನು ಉಪವಿಭಾಗೀಯ ಕಚೇರಿಯಲ್ಲಿ ಅಭಿರಕ್ಷೆಯಲ್ಲಿಡುವುದು ಅಗತ್ಯವೆಂದು ಭಾವಿಸಿದಲ್ಲಿ, ಅಂಥ ದಾಖಲೆಗಳನ್ನು ಉಪವಿಭಾಗೀಯ ಕಚೇರಿಯಲ್ಲಿ ಅಭಿರಕ್ಷೆಯಲ್ಲಿಡಬಹುದು.

(xi) ಸಹಕಾರಿ ಚುನಾವಣಾ ಆಯೋಗವು ನಿರ್ದೇಶಿಸುವ ಅಂಥ ಅವಧಿಗೆ, ರಿಟರ್ನಿಂಗ್ ಅಧಿಕಾರಿಯು ತನ್ನ ವ್ಯಾಪ್ತಿಯಲ್ಲಿ ಬರುವ ಯಾವುದೇ ಸಹಕಾರಿಯ ಸಾಮಾನ್ಯ ಚುನಾವಣೆಗೆ ಸಂಬಂಧಪಟ್ಟಂತೆ ತಾನು ತಯಾರಿಸಿದ ಅಥವಾ ಸಹಾಯಕ ರಿಟರ್ನಿಂಗ್ ಅಧಿಕಾರಿಯಿಂದ ಸ್ವೀಕರಿಸಿದ ಎಲ್ಲಾ ಕಾಗದ ಪತ್ರಗಳನ್ನು, ದಸ್ತಾವೇಜುಗಳನ್ನು ತನ್ನ ಸುಪರ್ದಿನಲ್ಲಿ ಇಟ್ಟಿರತಕ್ಕದ್ದು.

(xii) ಕಾಲಕಾಲಕ್ಕೆ ಸಹಕಾರಿ ಚುನಾವಣಾ ಆಯೋಗವು ವಹಿಸುವ ಅಂಥ ಇತರ ಪ್ರಕಾರ್ಯಗಳನ್ನು ರಿಟರ್ನಿಂಗ್ ಅಧಿಕಾರಿಯು ನಿರ್ವಹಿಸತಕ್ಕದ್ದು.

(3) ಪ್ರತಿ ಸಹಕಾರಿಯ ಮುಖ್ಯ ಕಾರ್ಯನಿರ್ವಾಹಕನು ಚುನಾವಣೆ ಸಂಬಂಧದಲ್ಲಿ ರಿಟರ್ನಿಂಗ್ ಅಧಿಕಾರಿ ಅಪೇಕ್ಷಿಸುವ ಸೂಕ್ತವಾದ ಸಹಾಯ ಮತ್ತು ನೆರವನ್ನು ಒದಗಿಸತಕ್ಕದ್ದು.

**5ಡಿ. ಪ್ರಿಸೈಡಿಂಗ್ ಅಧಿಕಾರಿಗಳು ಮತ್ತು ಚುನಾವಣಾ ಸಿಬ್ಬಂದಿ ನೇಮಕಾತಿ:–** (1) ಜಿಲ್ಲಾ ಚುನಾವಣಾಧಿಕಾರಿಯು ಪ್ರತಿಯೊಂದು ಮತದಾನದ ಕೇಂದ್ರಕ್ಕಾಗಿ ಒಬ್ಬ ಪ್ರಿಸೈಡಿಂಗ್ ಅಧಿಕಾರಿಯನ್ನು ಮತ್ತು ತಾನು ಅವಶ್ಯವೆಂದು ಭಾವಿಸುವಂಥ ಪೋಲಿಂಗ್ ಅಧಿಕಾರಿ ಅಥವಾ ಅಧಿಕಾರಿಗಳನ್ನು ನೇಮಕಮಾಡಬಹುದು.

(2) ಪ್ರಿಸೈಡಿಂಗ್ ಅಧಿಕಾರಿಯು ಹಾಗೆ ನಿರ್ದೇಶಿಸಿದಲ್ಲಿ, ಪೋಲಿಂಗ್ ಅಧಿಕಾರಿಯು ಈ ನಿಯಮಗಳ ಅಡಿಯಲ್ಲಿ ಪ್ರಿಸೈಡಿಂಗ್ ಅಧಿಕಾರಿಯ ಎಲ್ಲ ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸತಕ್ಕದ್ದು.

(3) ಪ್ರಿಸೈಡಿಂಗ್ ಅಧಿಕಾರಿಯು ಅನಾರೋಗ್ಯದಿಂದಾಗಿ ಅಥವಾ ಇತರ ಅನಿವಾರ್ಯ ಕಾರಣದಿಂದಾಗಿ ಮತದಾನ ಕೇಂದ್ರದಿಂದ ಗೈರುಹಾಜರಾಗಲೇಬೇಕಾದರೆ, ಯಾವುದೇ ಅಂಥ ಗೈರುಹಾಜರಿಯ ಕಾಲದಲ್ಲಿ ಅಂಥ ಪ್ರಕಾರ್ಯಗಳನ್ನು ನೆರವೇರಿಸಲು ರಿಟರ್ನಿಂಗ್ ಅಧಿಕಾರಿಯು ಈ ಹಿಂದೆಯೇ ಅಧಿಕೃತಗೊಳಿಸಿದಂಥ ಅವನ ಪ್ರಕಾರ್ಯಗಳನ್ನು ಪೋಲಿಂಗ್ ಅಧಿಕಾರಿಯು ನೇರವೇರಿಸಕ್ಕದ್ದು.

(4) ಮತದಾನ ಕೇಂದ್ರದಲ್ಲಿ ಸುವ್ಯವಸ್ಥೆಯನ್ನು ಕಾಪಾಡುವುದು ಮತ್ತು ಮತದಾನವು ನ್ಯಾಯಯುತವಾಗಿ ನಡೆಯುವಂತೆ ನೋಡಿಕೊಳ್ಳುವುದು ಪ್ರಿಸೈಡಿಂಗ್ ಅಧಿಕಾರಿಯ ಸಾಮಾನ್ಯ ಕರ್ತವ್ಯವಾಗಿರತಕ್ಕದ್ದು.

(5) ಮತದಾನ ಕೇಂದ್ರದ ಪ್ರಿಸೈಡಿಂಗ್ ಅಧಿಕಾರಿಗೆ ಅವನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಸಹಾಯ ಮಾಡುವುದು ಆ ಮತದಾನ ಕೇಂದ್ರದ ಪೋಲಿಂಗ್ ಅಧಿಕಾರಿಯ ಕರ್ತವ್ಯವಾಗಿರತಕ್ಕದ್ದು.

(6) ಪ್ರತಿ ಸಹಾಯಕ ರಿಟರ್ನಿಂಗ್ ಅಧಿಕಾರಿಯು, ರಿಟರ್ನಿಂಗ್ ಅಧಿಕಾರಿಯ ನಿಯಂತ್ರಣಕ್ಕೊಳಪಟ್ಟು, ರಿಟರ್ನಿಂಗ್ ಅಧಿಕಾರಿಯು ಅಥವಾ ಸಹಕಾರಿ ಚುನಾವಣಾ ಆಯೋಗವು ವಹಿಸುವಂತೆ ರಿಟರ್ನಿಂಗ್ ಅಧಿಕಾರಿಯ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಲು ಸಕ್ಷಮನಾಗಿರತಕ್ಕದ್ದು.

(7) ರಿಟರ್ನಿಂಗ್ ಅಧಿಕಾರಿ ಅಥವಾ ಸಹಾಯಕ ರಿಟರ್ನಿಂಗ್ ಅಧಿಕಾರಿಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣದಲ್ಲಿ ಸಾಮಾನ್ಯ ಚುನಾವಣೆಯ ದಿನದಂದು ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೋಲಿಂಗ್ ಅಧಿಕಾರಿಗಳು ಮತದಾನವನ್ನು ನಡೆಸತಕ್ಕದ್ದು ಮತ್ತು ಮತದಾನ ಮುಕ್ತಾಯವಾದ ಕೂಡಲೇ ಸದಸ್ಯರು ಅಥವಾ ಪ್ರತಿನಿಧಿಗಳು ಅಥವಾ ಡೆಲಿಗೇಟುಗಳು ಹಾಕಿದ ಮತಗಳನ್ನು ಎಣಿಸತಕ್ಕದ್ದು ಮತ್ತು ನಿರ್ದೇಶಿಸಿದಂತೆ ವರದಿಗಳನ್ನು ತಯಾರಿಸತಕ್ಕದ್ದು. ಅವರು ಸಾಮಾನ್ಯ ಚುನಾವಣೆಗೆ ಸಂಬಂಧಪಟ್ಟ ದಾಖಲೆಗಳನ್ನು ಅಥವಾ ಸಾಮಗ್ರಿಗಳನ್ನು ಸಂಬಂಧಪಟ್ಟ ರಿಟರ್ನಿಂಗ್ ಅಧಿಕಾರಿ ಅಥವಾ ಸಹಾಯಕ ರಿಟರ್ನಿಂಗ್ ಅಧಿಕಾರಿಗೆ ಸಲ್ಲಿಸತಕ್ಕದ್ದು.

**5ಇ. ಸಾಮಾನ್ಯ ಚುನಾವಣೆಗಾಗಿ ಅಧಿಸೂಚನೆ: (1)** ಪ್ರಕರಣ 26ರಲ್ಲಿ ಉಲ್ಲೇಖಿಸಿದ ಸಾಮಾನ್ಯ ಚುನಾವಣೆಗಾಗಿ ಜಿಲ್ಲಾ ಚುನಾವಣಾಧಿಕಾರಿಯು, ಸಹಕಾರಿ ಚುನಾವಣಾ ಆಯೋಗದ ಅನುಮೋದನೆ ಪಡೆದನಂತರ, ನಮೂನೆ 1ಎರಲ್ಲಿ ಅಧಿಸೂಚನೆಯನ್ನು ಹೊರಡಿಸತಕ್ಕದ್ದು.

(2) ಜಿಲ್ಲಾ ಚುನಾವಣಾಧಿಕಾರಿಯು, ಅಂಥ ಅಧಿಸೂಚನೆಯಲ್ಲಿ:–

(i) ಸಾಮಾನ್ಯ ಚುನಾವಣೆಯ ದಿನಾಂಕದ ನಿಕಟಪೂರ್ವದ ಏಳನೇ ಸ್ಪಷ್ಟ ಮುಂಬರುವ ದಿನವು ಇಚ್ಛೆಯುಳ್ಳ ಅಭ್ಯರ್ಥಿಗಳಿಂದ ನಾಮಪತ್ರವನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರತಕ್ಕದ್ದು.

(ii) ನಾಮಪತ್ರ ಸ್ವೀಕರಿಸಲು ನಿಗದಿಯಾದ ಕೊನೆಯ ದಿನಾಂಕದ ನಿಕಟ ಮುಂಬರುವ ದಿನವು ನಾಮಪತ್ರ ಪರಿಶೀಲನಾ ದಿನಾಂಕವಾಗಿರತಕ್ಕದ್ದು.

(iii) ಸಾಮಾನ್ಯ ಚುನಾವಣೆಯ ದಿನಾಂಕದ ನಿಕಟಪೂರ್ವದ ಐದನೇ ಸ್ಪಷ್ಟ ಮುಂಬರುವ ದಿನವು ಸ್ಪರ್ಧಿಸುವ ಅಭ್ಯರ್ಥಿಗಳು ನಾಮಪತ್ರಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕವಾಗಿರತಕ್ಕದ್ದು.

(iv) ಅಗತ್ಯಬಿದ್ದಲ್ಲಿ ಮತದಾನ ನಡೆಯುವ ದಿನಾಂಕ ಹಾಗೂ ಸಮಯವನ್ನು ನಿಗದಿಪಡಿಸತಕ್ಕದ್ದು.

